ಶ್ರೀ ಆದಿಚುಂಚನಗಿರಿ ಗ್ರಾಮಗೀತ ಮಾಲಿಕೆ—೧

# ಹಾಡಾನ ಬನ್ನಿ ದನಿಯೆತ್ತಿ



ಧ್ವನಿಮುದ್ರಣ, ಸಂಗ್ರಹ ಮತ್ತು ಸಂಪಾದನೆ

ಎಚ್. ಎಲ್. ನಾಗೇಗೌಡ




ಕರ್ನಾಟಕ ಜಾನಪದ ಟ್ರಸ್ಟ್

ಬೆಂಗಳೂರು—೨೦

# ಗ್ರಾಮಗೀತಾಯಜ್ಞ

ನಾನು ಯಾವ ಘಳಿಗೆಯಲ್ಲಿ ಗ್ರಾಮೀಣ ಸಾಹಿತ್ಯ, ಸಂಗೀತ, ನೃತ್ಯ ಇತ್ಯಾದಿಗಳಲ್ಲಿ ಆಸಕ್ತಿ ವಹಿಸಿದೆನೋ ಕಾಣೆ ಅಂದಿನಿಂದ ಅವುಗಳಲ್ಲಿ ತಲ್ಲೀನನಾಗಿಬಿಟ್ಟೆ. ಹುಟ್ಟಿದ್ದು ಬೆಳೆದದ್ದು ಹಳ್ಳಿಯಲ್ಲಿ. ನಾನು ಮೂರು ವರ್ಷದ ಮಗುವಾಗಿರುವಾಗಲೇ ನನ್ನ ತಾಯಿ ಇನ್‌ಫ್ಲುಯೆಂಜಾ ಕಾಯಿಲೆಯಲ್ಲಿ ತೀರಿಕೊಂಡಳಂತೆ. ದೊಡ್ಡ ಮನೆಗೆ ಹಿರಿಯ ಸೊಸೆಯಾಗಿದ್ದ ಆಕೆ ದಿನಾ ಇಕ್ಕಳ ಮೂಗಳ ರಾಗಿಯನ್ನು ಬೀಸಬೇಕಾಗಿತ್ತು. ಬೆಳಗ್ಗೆ ಮುಂಗೋಳಿ ಕೂಗಿದ ಕೂಡಲೇ ಎದ್ದು ಮನೆಯಲ್ಲಿ ಕೆಲಸಕ್ಕೆ ಇದ್ದ ಹೊಲೆಯರ ದೊಡ್ಡಿಯ ಜೊತೆ ಬೀಸಲು ಆರಂಭಿಸುತ್ತಿದ್ದಳಂತೆ. ಅವ್ವನ ಮಗ್ಗುಲಲ್ಲಿ ಮಲಗುತ್ತಿದ್ದ ನಾನೂ ಎಚ್ಚರವಾಗಿ ಅಳತೊಡಗಿದಾಗ ಆಕೆ ನನ್ನನ್ನು ತನ್ನ ತೊಡೆಯಮೇಲೆ ಹಾಕಿಕೊಂಡು ಹಾಡಿಕೊಂಡು ಬೀಸುತ್ತಿದ್ದಳಂತೆ. ಬಹುಶಃ ಆಗಲೇ ನನ್ನ

ಹೃದಯದಲ್ಲಿ ಹಳ್ಳಿಯ ಗಾನದ ಬೀಜ ಬಿತ್ತನೆಯಾಗಿರ ಬೇಕು. ಆ ಬೀಜಕ್ಕೆ ಹಾಡಿನ ರೂಪದಲ್ಲಿ ನನ್ನೂರಿನ ಬೀಸುವ ಪದ, ಮದುವೆ ಪದ, ದೇವರಪದ, ಕೋಲಾಟದ ಪದ ಮುಂತಾದ ನೀರು ಗೊಬ್ಬರ ಬೀಳುತ್ತಿದ್ದರೂ ಏಕೋ ಬೀಜ ಮೊಳೆಯಲೇ ಇಲ್ಲ. ಅದು ಮೊಳಕೆಯಾಗ ಬೇಕಾದರೆ ಸುಮಾರು ೫೦ ವರ್ಷಗಳೇ ಕಳೆದುವು. ಆ ೫೦ ವರ್ಷಗಳಲ್ಲಿ ಅಂದರೆ ನನ್ನ ಬಾಲ್ಯದಲ್ಲಿ, ವಿದ್ಯಾರ್ಥಿ ದೆಸೆಯಲ್ಲಿ, ಸರ್ಕಾರಿ ಸೇವೆಯಲ್ಲಿ, ಗ್ರಾಮೀಣ ಬದುಕು ಇನ್ನೂ ಹಸಿ ಹಸಿಯಾಗಿರುವಾಗಲೇ ಆ ಕಡೆ ಗಮನ ಹೋಗ ದಿದ್ದುದು ಇದ್ದಕ್ಕಿದ್ದಂತೆ ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾಧಿ ಕಾರಿಯಾಗಿದ್ದಾಗ ಆಸಕ್ತಿಯ ಗಿಡ ನೆಲದಿಂದ ಚಿಮ್ಮಿತು. ದೊಡ್ಡಾಲದ ಮರವಾಗಿ ಬೆಳೆದು ನೂರಾರು ಬಿಳಲು ಬಿಟ್ಟಿತು. ಅದಕ್ಕೆ ಮುನ್ನ ಸರ್ಕಾರಿ ಸೇವೆಯಲ್ಲಿ ನರಸಿಂಹ ರಾಜಪುರ, ಚಿಕ್ಕಮಂಗಳೂರು, ಶಿವಮೊಗ್ಗ, ಭದ್ರಾವತಿ, ಟಿ. ನರಸೀಪುರ, ಮಂಡ್ಯ, ಮೈಸೂರು, ಹರಿಹರ, ದಾವಣ ಗೆರೆ, ಚಿಕ್ಕಬಳ್ಳಾಪುರ ಮುಂತಾದ ಕಡೆ ಕೇವಲ ಸರ್ಕಾರಿ ಕೆಲಸದಲ್ಲಿ ಮಾತ್ರ ಆಸಕ್ತಿ ವಹಿಸಿ ಹೆಸರುಗಳಿಸುವುದರಲ್ಲಿ ತಲ್ಲೀನನಾಗಿದ್ದೆ. ಆದರೆ ದಕ್ಷಿಣ ಕನ್ನಡ ಜಿಲ್ಲೆಯ ಯಕ್ಷಗಾನ, ಬಂಟರು, ಮಲೆಕುಡಿಯರು, ಕೊರಗರು ಮುಂತಾದವರ ಬಾಳಿನಲ್ಲಿ ಆಸಕ್ತಿ ಹುಟ್ಟಿತೋ ಆಗಿನಿಂದ ನನ್ನ ಸಾರಸ್ವತ ಬಾಳೇ ಬೇರೆ ದಿಕ್ಕಿಗೆ ತಿರುಗಿತು. ಅಲ್ಲಿಯವರೆಗೆ ಸಾಹಿತ್ಯ ರಚನೆಯಲ್ಲಿ ತೊಡಗಿದ್ದ ನಾನು ಜಾನಪದ ಕ್ಷೇತ್ರದ ಕಡೆಗೂ

ಗಮನ ಹರಿಸಿದೆ. ಇಡೀ ರಾತ್ರಿ ಯಕ್ಷಗಾನ ನಾಟಕಗಳನ್ನು ನೋಡಲಾರಂಭಿಸಿದೆ. ಮನೆಗಳಲ್ಲಿ ವಾಸಮಾಡುವ ಮನೆ ಕಂಡಿಯರಂಥ ಜನರ ಹಾಡು ಮುಂತಾದವುಗಳನ್ನು ಅವರಿರುವ ಮನೆಗಳಿಗೇ ಹೋಗಿ ಕೇಳಲಾರಂಭಿಸಿದೆ. ದ. ಕ. ಜಿಲ್ಲೆಯ ವಿಶಿಷ್ಟ ಸಂಪ್ರದಾಯಗಳು, ಅದರಲ್ಲಿಯೂ ಬಂಟರು ಯಾನೆ ನಾಡವರ ಶುಭಾಶುಭ ಕಟ್ಟಲೆಗಳು ನನ್ನನ್ನು ಆಕರ್ಷಿಸಿದುವು. ಘಟ್ಟದ ಮೇಲಿನ ಕಲೆಗಳ ಪರಿಚಯವನ್ನು ದ. ಕ. ಜಿಲ್ಲೆಗೆ ಮಾಡಿಕೊಡಬೇಕೆಂದು ಇಲ್ಲಿಂದ ಬಸ್‌ಗಟ್ಟಲೆ ಕಲಾವಿದರನ್ನು ಅಲ್ಲಿಗೆ ಬರಮಾಡಿಕೊಂಡು ಮೊಟ್ಟಮೊದಲಿಗೆ ಅವರ ಪರಿಚಯವನ್ನು ಅಲ್ಲಿಯವರಿಗೆ ಮಾಡಿಕೊಟ್ಟುದಲ್ಲದೆ ಇಲ್ಲಿಯವರಿಗೆ ಎಂದೂ ಕಾಣದ ಸಮುದ್ರವನ್ನು ಕಾಣಿಸಿದೆ.

ಈ ನನ್ನ ಆಸಕ್ತಿ ಧ್ವನಿಮುದ್ರಣಕ್ಕೆ ತಿರುಗಿತು. ಇಷ್ಟರಲ್ಲಿ ಧ್ವನಿಮುದ್ರಣಯಂತ್ರ ಬಂದಿತ್ತು. ೧೯೭೧-೭೩ರಲ್ಲಿ ಶಿವಮೊಗ್ಗ ಜಿಲ್ಲೆಯ ಡಿ.ಸಿ. ಆಗಿದ್ದಾಗ ಡಿ.ವೈ.ಎಸ್.ಪಿ. ಅಬೀದ್ ಆಲಿ ಅವರು ಬುಷ್ ಕಂಪೆನಿಯ ಕ್ಯಾಸೆಟ್ ಟೇಪ್ ರಿಕಾರ್ಡರನ್ನು ಪ್ಲೇಮಾಡಿ ತೋರಿಸಿದಾಗ ಅದರ ಮಹತ್ವ ನನಗೆ ಅರಿವಾಗಲೇ ಇಲ್ಲ. ಆಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಆನಂತರ ಚಿಕ್ಕಮಂಗಳೂರು ಜಿಲ್ಲೆಯಲ್ಲಿ ಅದರ ಕಡೆ ಕಣ್ಣೆತ್ತಿಯೂ ನೋಡಲಿಲ್ಲ. ಹೀಗೆ ೨೫ವರ್ಷದ ಬಾಳು ವ್ಯರ್ಥವಾಗಿಹೋಗಿತ್ತು. ಕಲೆ ಮತ್ತು ಬಾಳಿನ ಬೆಲೆ ತಿಳಿದದ್ದು ದ.ಕ. ಜಿಲ್ಲೆಗೆ

ಹೋದಾಗ ಮಲ್ಪೆ ಮಧ್ವರಾಜರು ಜಪಾನಿನಿಂದ ತಂದ ಮೂರು ಇಂಚು ಸ್ಪೂಲಿನ ಒಂದು ಟೇಪ್‌ರೆಕಾರ್ಡರ್ ಕೊಟ್ಟರು. ಆರೂರು ಕೃಷ್ಣಮೂರ್ತಿ ಎಂಬುವರು ಜರ್ಮನಿಯ ತಯಾರಿ ಆರು ಇಂಚು ಸ್ಪೂಲಿನ ಗ್ರುಂಡಿಗ್ ಟೇಪ್ ರಿಕಾರ್ಡರನ್ನೇ ಕೊಟ್ಟರು. ಇಲ್ಲಿಂದ ನನ್ನ ಧ್ವನಿ ಮುದ್ರಣ ಕಾರ್ಯ ಕ್ರಮವಾಗಿ ಆರಂಭವಾಯಿತು. ಮೊಟ್ಟಮೊದಲು ನನ್ನೂರಿನ ಸೋಬಾನೆ ಚಿಕ್ಕಮ್ಮನ ಪದ ಗಳನ್ನೇ ಧ್ವನಿಮುದ್ರಿಸಿಕೊಂಡೆ. ಆಕೆಯಲ್ಲಿದ್ದ ಸಕಲ ಸರ ಕನ್ನು ಹೊರಗೆಡಹಲು ಹಲವಾರು ಕಡೆ ಅಂದರೆ ನನ್ನೂರಿ ನಲ್ಲಿ, ಅಂಚೆಕೊಪ್ಪಲಿನಲ್ಲಿ, ಕೊನೆಗೆ ಮಂಗಳೂರಿನಲ್ಲಿಯೂ ರಿಕಾರ್ಡ್ ಮಾಡಿಕೊಳ್ಳಬೇಕಾಯಿತು. ಇನ್ನೇನೂ ಅವಳಲ್ಲಿ ಏನೂ ಉಳಿದಿಲ್ಲ ಎಂದು ಖಚಿತಮಾಡಿಕೊಂಡಮೇಲೆಯೇ ಆಕೆಯ ಕೈಬಿಟ್ಟೆ.

ಆಕೆ ಹಿಡಿಸಿದ ಹುಚ್ಚು ನನ್ನನ್ನು ಹುಚ್ಚನಾಯಿ ಯಾಗಿ ಮಾಡಿಬಿಟ್ಟಿತು. ಟೇಪ್‌ರಿಕಾರ್ಡ್‌ಗಳನ್ನು ಹೊತ್ತು ಕೊಂಡು ತಿರುಗದ ಸ್ಥಳವಿಲ್ಲ, ಕೇಳದ ಹಾಡಿಲ್ಲ. ಲೇಬರ್ ಕಮೀಷನರ್ ಆಗಿ, ಸರ್ವೇ ಇಲಾಖೆಯ ಮುಖ್ಯಾಧಿಕಾರಿ ಯಾಗಿ, ಲೋಕಸೇವಾ ಆಯೋಗದ ಸದಸ್ಯನಾಗಿ ಇಡೀ ಕರ್ನಾಟಕದಲ್ಲಿ ನನ್ನ ತಿರುಗಾಟಕ್ಕೆ ತುಂಬಾ ಅನುಕೂಲ ವಾಗಿತ್ತು. ಆ ಕಾಲವನ್ನು ಸದುಪಯೋಗಪಡಿಸಿಕೊಂಡೆ. ನಿವೃತ್ತನಾಗಿ ಟ್ರಸ್ಟನ್ನು ಸ್ಥಾಪಿಸಿ ಸುಮಾರು ೧೦ ವರ್ಷ ಗಳ ಕಾಲ ಇನ್ನೂ ಹೆಚ್ಚಿನ ರೀತಿಯಲ್ಲಿ ಧ್ವನಿಮುದ್ರಣ

ಮಾಡುತ್ತಾ ಬಂದೆ. ಸಹಸ್ರಾರು ಗಂಟೆಗಳ ಧ್ವನಿಮುದ್ರಣ ವಾದ ಅನಂತರವೇ ನನ್ನ ಹುಚ್ಚು ಇಳಿಯಿತು. ಈಗ ಒಂದಿಷ್ಟು ಶಮನವಾಗಿದೆ.

ನನ್ನ ಹುಚ್ಚು ಒಂದು ತರಹದ್ದಲ್ಲ, ಹತ್ತಾರು ಬಗೆಯದು. ಟ್ರಸ್ಟ್ ಮತ್ತು ಅಕಾಡೆಮಿಗಳ ಸ್ಥಾಪನೆ, ಆದಿಚುಂಚನಗಿರಿ ಶ್ರೀ ಭೈರವೇಶ್ವರ ಗೀತಗಾಯನ ಮೇಳ, ಕಲಾಮೇಳಗಳು, ವಿಡಿಯೋ ಚಿತ್ರೀಕರಣ, ಸ್ಲೈಡ್ ತಯಾರಿಕೆ, ಮ್ಯೂಸಿಯಂ ಇತ್ಯಾದಿ ಇತ್ಯಾದಿ. ಇವೆಲ್ಲವುಗಳ ಹುಚ್ಚು ಈಗೀಗ ಕಡಿಮೆಯಾಗುತ್ತಿದೆ. ಆದರೆ ಹೊಸ ಹುಚ್ಚೊಂದು ನನಗೆ ಹಿಡಿದಿದೆ. ಇದು ಸಾಮಾನ್ಯವಾದ ಹುಚ್ಚಲ್ಲ. ಅದ್ಯಾವುದು ಎಂದರೆ ಜಾನಪದ ಲೋಕದ ನಿರ್ಮಾಣ. ಇದು ನನ್ನ ಬಾಳಿನ ಕೊನೆಯವರಿಗೂ ನನ್ನನ್ನು ಬಿಡದ ಹುಚ್ಚು.

* * *

ಬೆಳೆಯನ್ನು ಹುಲುಸಾಗಿ ಬೆಳೆದು ಗಗನದೆತ್ತರಕ್ಕೆ ಮೆದೆ ಹಾಕಲಾಗಿದೆ. ಹಾಗೇ ಮೆದೆಯಲ್ಲಿದ್ದರೆ ಬೆಳೆ ಮುಗ್ಗಿ ಕೆಟ್ಟೇಹೋಗುತ್ತದೆ. ಇಂಥಾದ್ದು ಆಗಬಾರದು ಎಂದು ಕಣಮಾಡಿ ಒಕ್ಕಿ ತೂರಿ ಕೇರಿ ಹಸನುಮಾಡಿ ಉಣಬಡಿಸುವ ಕೆಲಸವನ್ನು ಈಗ ನಡೆಸಿದ್ದೇನೆ. ನನ್ನಲ್ಲಿರುವುದರಲ್ಲಿ ಅತ್ಯುತ್ತಮವಾದ ದನಿ ಧಾಟಿ ಸಾಹಿತ್ಯ ಮುಂತಾದವುಗಳನ್ನು ಕ್ಯಾಸೆಟ್ ಮಾಡಿದರೆ ೪೫ ನಿಮಿಷದ ಸುಮಾರು ೩೦೦ ಕ್ಯಾಸೆಟ್‌ಗಳಾಗಬಹುದು. ಈಗ ಆ ಕೆಲಸವನ್ನು

ಆರಂಭಿಸಿ ಮೂರು ಗ್ರಾಮಗೀತೆ ಕ್ಯಾಸೆಟ್‌ಗಳನ್ನು ಶುಕ್ಲ ಸಂವತ್ಸರದ ಯುಗಾದಿಯ ದಿನ ಬಿಡುಗಡೆ ಮಾಡಲಾಗಿದೆ. ಇನ್ನು ಮುಂದೆ ತಿಂಗಳಿಗೆ ಒಂದೆರಡಾದರೂ ಕ್ಯಾಸೆಟ್‌ಗಳ ಬಿಡುಗಡೆ ಮಾಡುವ ಉದ್ದೇಶವಿದೆ.

ಕ್ಯಾಸೆಟ್‌ಗಳನ್ನು ಕೇಳಿದವರಿಗೆ ಹಳ್ಳಿಯವರ ಹಾಡಿನ ಧಾಟಿಯೇನೊ ತಿಳಿಯುತ್ತದೆ. ಆದರೆ ಸಾಹಿತ್ಯ ಸ್ಪಷ್ಟವಾಗಿ ಅರ್ಥವಾಗದೇ ಹೋಗಬಹುದು. ಆದ್ದರಿಂದ ಕ್ಯಾಸೆಟ್‌ಗಳಲ್ಲಿ ಬರುವ ಹಾಡುಗಳ ಸಾಹಿತ್ಯವನ್ನು ಬರೆದು ಕೊಂಡು ಪುಸ್ತಕ ರೂಪದಲ್ಲಿ ಪ್ರಕಟಿಸುವುದು ಸೂಕ್ತ ಎಂದು ಆ ಕೆಲಸಕ್ಕೂ ಕೈಹಾಕಿದ್ದೇನೆ.

* * *

ಹಾಡಿದವರ ಪರಿಚಯವನ್ನು ಪುಸ್ತಕದಲ್ಲಿ ಸಾಕಷ್ಟು ವಿವರವಾಗಿ ನೀಡಲಾಗಿದೆ. ಒಬ್ಬೊಬ್ಬರು ಹತ್ತಿಪ್ಪತ್ತು ಹಾಡುಗಳನ್ನು ಅಷ್ಟೇ ಧಾಟಿಗಳಲ್ಲಿ ಅಥವಾ ದನಿಗಳಲ್ಲಿ ಪುಸ್ತಕಗಳ ಸಹಾಯವಿಲ್ಲದೆ ಯಾವ ಘಳಿಗೆ ಎಂದರೆ ಆ ಘಳಿಗೆ ಕೇವಲ ಮಸ್ತಕದಿಂದ ಹೇಳುವ ಈ ಹಾಡುಗಾರರು ಬೇರೆ ಶಿಷ್ಟ ಹಾಡುಗಾರರಿಗಿಂತ ಕಡಿಮೆ ಅಲ್ಲ ಎಂದೇ ನನ್ನ ಭಾವನೆ. ಈ ಅಕ್ಕ-ತಂಗಿಯರ ಅಣ್ಣ-ತಮ್ಮಂದಿರ ಒಡ ನಾಟ ಸುಮಾರು ೨೫ ವರ್ಷಗಳದ್ದು. ಅವರ ವಿಷಯ ನನಗೆ ತಿಳಿದಿರುವಷ್ಟು ಬೇರೆಯವರಿಗೆ ತಿಳಿದಿರಲಾರದು. ಅವರ ಪರಿಚಯವನ್ನು ನಾನು ಮಾಡಿಕೊಡದಿದ್ದರೆ ಬೇರೆ ಯಾವರೂ ಮಾಡಲಾರರು. ಅದನ್ನು ಇಲ್ಲಿ ಮಾಡಿದ್ದೇನೆ.

ಹಾಗೆ ಮಾಡುವಾಗ ನನ್ನ ಜಾನಪದ ಕ್ಷೇತ್ರಕಾರ್ಯದ ರಸಯಾತ್ರೆಯ ಕಥೆಯೂ ಬರುತ್ತದೆ.

ಹಾಡುಗಳಲ್ಲಿ ಬರುವ ಪದಗಳಿಗೆ ನನಗೆ ತಿಳಿದ ಮಟ್ಟಿಗೆ ಅರ್ಥ, ವಿವರಣೆ ಕೊಟ್ಟಿದ್ದೇನೆ. ಹಾಡುಗಳಿಗೆ ಸ್ವರ ಹಾಕುವ ಪ್ರಯತ್ನ ಸಾಗಿದೆ. ಮುಂದೆ ಅದನ್ನು ಪ್ರಕಟಿಸಲಾಗುವುದು.

ಕ್ಯಾಸೆಟ್‌ಗಳು ಮತ್ತು ಪುಸ್ತಕಗಳ ಮಾರಾಟದಿಂದ ಬಂದ ಹಣದಲ್ಲಿ ಕೊಂಚ ಭಾಗವನ್ನು ಹಾಡುಗಾರರಿಗೆ ಕೊಡಬೇಕೆಂಬುದು ನನ್ನ ಉದ್ದೇಶವಾಗಿದೆ. ಆದ್ದರಿಂದ ಕ್ಯಾಸೆಟ್‌ಗಳನ್ನೂ ಜೊತೆಗೆ ಪುಸ್ತಕಗಳನ್ನೂ ಆಸಕ್ತರು ಕೊಂಡು ಕಲಾವಿದರಿಗೆ ಪ್ರೋತ್ಸಾಹ ಮಾಡಬೇಕಾಗಿ ನನ್ನ ವಿನಂತಿ.

ನನ್ನ ಕಾಲು ಶತಮಾನದ ಅವಧಿಯಲ್ಲಿ ನೆರವಾದ ವರು ನೂರಾರು ಅಲ್ಲ ಸಾವಿರಾರು. ಅವರೆಲ್ಲರ ಹೆಸರು ಹೇಳದೆ ನನ್ನ ಅತ್ಯಂತ ಭಕ್ತಿಯ ಕೃತಜ್ಞತೆಗಳನ್ನು ಸಲ್ಲಿಸು ತ್ತೇನೆ.

* * *

೧೯೭೪ರಿಂದಲೇ ಶ್ರೀ ಆದಿಚುಂಚನಗಿರಿ ಕ್ಷೇತ್ರದ ಪೀಠಾಧ್ಯಕ್ಷರಾದ ಶ್ರೀ ಶ್ರೀ ಬಾಲಗಂಗಾಧರನಾಥಸ್ವಾಮಿ ಗಳವರು ಈ ಗ್ರಾಮಗೀತಾಯಜ್ಞವನ್ನು ಕಂಕಣಬದ್ಧ ರಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಅಲ್ಲದೆ, ಈ ಗ್ರಾಮ ಗೀತ ಮಾಲಿಕೆಯ ಪ್ರಕಟಣೆಗೂ ಆಶೀರ್ವಾದ ಮಾಡಿರು

ತ್ತಾರೆ. ಇದಕ್ಕಾಗಿ ನಾನು ಅವರಿಗೆ ಎಲ್ಲಾ ಕಲಾವಿದರ ಪರವಾಗಿ ನನ್ನ ಹೃತ್ಪೂರ್ವಕ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ಶ್ರೀ ಆದಿಚುಂಚನಗಿರಿ ಕ್ಷೇತ್ರವನ್ನು ಕುರಿತು ಹತ್ತಾರು ದನಿ, ಧಾಟಿ, ಪಲ್ಲವಿ, ಸೊಲ್ಲುಗಳಲ್ಲಿ ಹಾಡುವ ಎಲ್ಲಾ ಹಾಡುಗಳು ಈ ಮಾಲಿಕೆಯಲ್ಲಿ ಬರುತ್ತವೆ.

* * *

ಹಿಂದೆ ಟ್ರಸ್ಟಿನಲ್ಲಿ ಕೆಲಸ ಮಾಡುತ್ತಿದ್ದ ಗೋವಿಂದರಾಜು ಹಾಗು ಚಿಕ್ಕರೆ ಶಿವಶಂಕರ್ ಮತ್ತು ಹಾಲಿ ಕೆಲಸ ಮಾಡುತ್ತಿರುವ ಎ. ಎಸ್. ಶಿವರಾಮು, ಕುರುಬ ಬಸವರಾಜು ಮತ್ತು ಕೆ. ಎ. ಶ್ರೀನಿವಾಸ ಇವರಿಗೆ ನನ್ನ ಶುಭ ಹಾರೈಕೆಗಳು.

ಒಳ್ಳೆಯ ಮುದ್ರಣಕಾರರಾದ ರಶ್ಮಿ ಮುದ್ರಣದವರಿಗೆ ನನ್ನ ವಂದನೆಗಳು.

ಬೆಂಗಳೂರು — ಎಚ್. ಎಲ್. ನಾಗೇಗೌಡ

೭-೪-೧೯೧೮

# ಹಾಡುಗಳು

## ಹಾಡಾನ ಬನ್ನಿ ದನಿಯೆತ್ತಿ

ಹಾಡಿರುವವರು : ಚುಂಚನಹಳ್ಳಿ ಪಾಳ್ಯದ ಗಿರಿಯಮ್ಮ ಮತ್ತು ಗಂಗಮ್ಮ.

ಗೂಟ ಹಿಡಿವಾಗ ಕೋಟೀಯಂ ನೆನುದೇವೆ
ಗೂಟಾದ ಹಸಿಟ್ಟು ತೆರಿಹೂದು –
ಗೂಟಾದ ಹಸಿಟ್ಟು ತೆರಿಹೂದು ಬರುವಾಗ
ಕೋಟಿ ಜಂಗಮುರ ನೆನುದೇವೆ

ಕೋಟಿ ಕೋಟಿ ಕಂಡೆ ಕೊರಳಲಿ ಲಿಂಗಾ ಕಂಡೆ
ದಾಟುಂತಲೆ ಕಂಡೆ ಜಲದೀಯಂ –
ದಾಟುಂತಲೆ ಕಂಡೆ ಜಲದಿ ಈರಯ್ಯನ
ಜಾತಾರೆ ಕಂಡೆ ಇರುಳೆಲ್ಲಾ

ಕ್ಯಾಸೆಟ್‌ನಲ್ಲಿರುವಂತೆ :

ಬೀಸಾನ ಬಾರೆ ಬಿನ್ನಾಣಿ ತಂಗ್ಯವ್ವ
ಬೀಸಾನ ಬಾರೆ ಕಡಲೇಯಂ–
ಬೀಸಾನ ಬಾರೆ ಕಡಲೆ ಗೋದಿಗಳ
ಹೇಳಾನ ಬಾರೆ ದನಿಯೆತ್ತಿ

ರಾಗಿಕಲ್ಲೀಗೆ ರನ್ನ ಚಿನ್ನದ ಗೂಟ
ರಾಮಣ್ಣನೆಂಬೊ ಹಿಡಿಗೂಟ–

ರಾವಂಣ್ಣನೆಂಬೊ ಹಿಡಿಗೂಟ ಹಿಡಕಂಡು
ರಾಮ ಲಕ್ಷ್ಮಣರ ನೆನಂದೇವೆ

ಅಕ್ಕಿ ಬೀಸೋ ಕಲ್ಲೆ ಸಕ್ಕಾರೆ ವಡಿಗಲ್ಲೆ
ಸಟ್ಟಿ ತಮ್ಮಯ್ನ ಸವಿಗಲ್ಲೆ -
ಸಟ್ಟಿ ತಮ್ಮಯ್ನ ಸವಿಗಲ್ಲೆ ರಾಗೀಕಲ್ಲೆ
ಭಾಗ್ಯವದ ಕಲ್ಲೆ ದನಿದೋರೆ

ಬೀಸೋಕಲ್ಲಿಗೆ ಹಾಸದಿರೆ ಮುಂಜೆರಗ
ದೇಸದ ಮ್ಯಾಲವನೆ ನನಿಗೊಬ್ಬ-
ದೇಸದ ಮ್ಯಾಲವನೆ ನನಿಗೊಬ್ಬ ತಮ್ಮಯ್ಯ
ದೆಸಿವಂತನಾಗಿ ಬದುಂಕಾಲಿ

ದೆಸಿವಂತನಾಗಿ ಅಷ್ಟಬಲ್ಲಿದನಾಗಿ
ದೊಡ್ಡೊಕ್ಕಲಾಗಿ ದೊರಿಯಾಗಿ-
ದೊಡ್ಡೊಕ್ಕಲಾಗಿ ದೊರಿಯಾಗಿ ಬದುಕಿದರೆ
ನಾವು ಸಂಟೂತಿರಾಗಿ ಬರುತೀವಿ

ಇದೇ ಧಾಟಿಯಲ್ಲಿ ಹಾಡಿದ ಇನ್ನಿತರ ನುಡಿಗಳು:

ಕಲ್ಲಮ್ಮತಾಯಿ ಮೆಲ್ಲಮ್ಮ ರಾಜುಣವ
ಜಲ್ಲ ಜಲ್ಲಾನೆ ಉದುರವ್ವ-
ಜಲ್ಲ ಜಲ್ಲಾನೆ ಉದುರವ್ವ ನಂಮನೆಯ
ಬೆಲ್ಲದಾರುತಿಯ ಬೆಳಗೇವು

ಬೀಸೋಕಲ್ಲೀಗೆ ಬಿಡಿಮುಂತ್ರ ಬಿಟ್ಟುಂಗೆ
ನೀಟಾಗಿ ಹುಯ್ಯೊ ಕಲ್ಲುಮುಳ್ಳ–
ನೀಟಾಗಿ ಹುಯ್ಯೊ ಕಲ್ಲುಮುಳ್ಳ ಕಲ್ಲುಕುಟಿಗ
ಬೀಸಾಕೆ ಬರುತಾರೆ ಗರತೀರು

ಕಾಲಾಡಿ ಕೈಯಾಡಿ ರಟ್ಯಾಡಿ ಭುಜವಾಡಿ
ನಾಗರ್ಹಾವಿನಂಗೆ ನಡುವಾಡಿ–
ನಾಗರ್ಹಾವಿನಂಗೆ ನಡುವಾಡಿ ಸರಸತಿಯು
ನಮುಕುಟ್ಟಾಡಿ ದಣಿದಲ್ಲೆ

ಸಂದೇಲಿ ಶ್ರೀಹರಿ ಬಂದೋಗೊ ನಮ್ಮನಿಗೆ
ಮುಂದಾಲಿಗಾವೆ ಮಣಿಯಾವೆ–
ಮುಂದಾಲಿಗಾವೆ ಮಣಿಯಾವೆ ನೀ ಕೊಟ್ಟ
ಕಂದಣ್ಣರವರೆ ಮನಿಯಾಗೆ

ಬಿಟ್ಹೋಯ್ತಾಳೆಂದು ಸಿಟ್ಟುಮಾಡಲಿ ಬ್ಯಾಡ
ಕುಕ್ಕೇಲಿ ರಾಗಿ ಬಿಳಿ ಎಲೆ–
ಕುಕ್ಕೇಲಿ ರಾಗಿ ಬಿಳಿ ಎಲೆ ತಕ್ಕಂಡು
ನಾವು ಮತ್ತೆ ರಾತಿರಿಕೆ ಬರುತೀವಿ

ಮುಂಗೋಳಿ ಕೂಗ್ಯಾವೆ ಮೂಡು ಕೆಂಪೇರ್ಯಾವೆ
ನಾರಾಯ್ಣಸ್ವಾಮಿ ರತವೇರಿ–
ನಾರಾಯ್ಣಸ್ವಾಮಿ ರತವೇರಿ ಬರುವಾಗ
ನಾವು ಕಲ್ಲ ಬಿಟ್ಟು ಕೈಯ ಮುಗಿದೇವು

ಬೆಳ್ಳಕ್ಕ ಬೆಳಕ್ಹರುದೊ ಬೆಳ್ಳಿದೇವ ಮೂಡೀದ
ಅಲ್ಲಿ ಸುಂಕದೋರು ತಡುದಾರೆ–
ಅಲ್ಲಿ ಸುಂಕದೋರು ತಡುದಾರೆ ತಮ್ಮಯ್ನ
ಬೆಳ್ಳಿದೇವನ ಬೆಳಕೀಗೆ

ಬೆಳ್ಳಗು ಬೆಳಕ್ಹರುದೊ ಬೆಳ್ಳಾರುತಿ ಎತ್ತಿ
ಒಳ್ಳೊಳ್ಳೆ ಮೀನು ಗರಿಬಿಟ್ಟೊ–
ಒಳ್ಳೊಳ್ಳೆ ಮೀನು ಗರಿಬಿಟ್ಟೊಟ್ದಾಡುವಾ?
ನಾವು ಕಲ್ಲ ಬಿಟ್ಟು ಕೈಯ ಮುಂಗುದೇವು

ಹಸಿಟ್ಟು = ಹಸಿ ಹಿಟ್ಟು. ತೆರಿಹೂದು = ತೆರೆತೆರೆಯಾಗಿ ಬೀಳು. ಜಾತಾರೆ = ಜಾತ್ರೆ ; ಉತ್ಸವ. ಇರುಳು = ರಾತ್ರಿ. ಸಕ್ಕಾರೆ = ಸಕ್ಕರೆ ; ಸಕ್ಕರೆಯಂತಹ. ವಡಿಗಲ್ಲೆ = ಒಡೆಯುವ ಕಲ್ಲೆ ; ಬೀಸುವ ಕಲ್ಲೆ. ಸಟ್ಟಿ = ಶೆಟ್ಟಿ. ರಾಜುಣ = ರಾಜಾನ್ನ ; ರಾಜರು ಉಣ್ಣುವ ಅನ್ನ. ಕಲ್ಲುಮುಳ್ಳು = ಸವೆದ ರಾಗಿಕಲ್ಲನ್ನು ಆಗಾಗ್ಗೆ ಕಲ್ಲುಕುಟಿಗನು ಉಳಿ ಸುತ್ತಿಗೆಯಿಂದ ಕುಟ್ಟಿ ಒರಟು ಮಾಡುವುದಕ್ಕೆ ಕಲ್ಲುಮುಳ್ಳು ಹುಯ್ಯಿಸವುದು ಎನ್ನುತ್ತಾರೆ. ಕಲ್ಲು ಮುಳ್ಳು ಹುಯ್ದುಮೇಲೆ ಅದಕ್ಕೆ ನಿಂಬೆಹಣ್ಣು ಸವರಿ ಬಿಸಲಿಗಿಡು ತ್ತಾರೆ. ನೆರಿಯ = ನೆರೆಮನೆಯ ; ಅಕ್ಕಪಕ್ಕದ. ಮುಂಜೆರಗ = ಕೊನೆ ಸೆರಗ. ಅಷ್ಟಬಲ್ಲಿದನಾಗಿ = ಅಷ್ಟೈಶ್ವರ್ಯದಿಂದ ಕೂಡಿ ದವನಾಗಿ. ನಂಟೂತಿರಾಗಿ = ನಂಟತಿಯರಾಗಿ. ರಟ್ಯಾಡಿ = ರಟ್ಟೆ ಆಡಿ. ನಮುಕುಟ್ಟಾಡಿ = ನಮ್ಮ ಸಂಗಡ ಆಡಿ. ಸಂದೇಲಿ = ಸಂಜೆಯಲ್ಲಿ. ಬೆಳ್ಳಿದೇವ = ಶುಕ್ರ ; ಬೆಳ್ಳಿಚುಕ್ಕಿ. ಗರಿಬಿಟ್ಟು = ಸೂರ್ಯನ ಬೆಳಕಿಗೆ ಓಡಾಡುತ್ತ.

# ಅಳೂಬ್ಯಾಡ ಪುಟ್ಟೂರಾಜು

## ಹಾಡಿರುವವರು : ಚಿಕ್ಕಾಡೆ ಹೊನ್ನಮ್ಮ

ಹಾಲು ಮಾರಿ ಬರುವೆನೊ ಕಾಲು ಗೆಜ್ಜೆ ತರುವೆನೊ
ಅಳೂಬ್ಯಾಡ ನಿಂಗೂರಾಜು ಅಂಗೀ ತರುವೆನು
ನೀನಳೂಬ್ಯಾಡ ಪುಟ್ಟೂರಾಜು ಹೋಗಿಬರುವೆನು

ಮೊಸರು ಮಾರಿ ಬರುವೆನೊ ಹಸರು ನಿಲಂಗಿ ತರುವೆನೊ
ಅಳೂಬ್ಯಾಡ ನಿಂಗೂರಾಜು ಅಂಗೀ ತರುವೆನು
ನೀನಳ್ಳೂಬ್ಯಾಡ ಪುಟ್ಟೂರಾಜು ಹೋಗಿಬರುವೆನು

ಬೆಣ್ಣೆ ಮಾರಿ ಬರುವೆನೊ ಬಣ್ಣದ ಗಿಲಕಿ ತರುವೆನೊ
ಅಳೂಬ್ಯಾಡ ನಿಂಗೂರಾಜು ಅಂಗೀ ತರುವೆನು
ನೀನಳೂಬ್ಯಾಡ ಪುಟ್ಟೂರಾಜು ಹೋಗಿ ಬರುವೆನು

ಮದ್ರಾಸ್‌ಗಾರಾ ಹೋಗುವೆನು ಮಳಿಗೇಲಂಗಿ ತರುವೆನು
ಅಳೂಬ್ಯಾಡ ನಿಂಗೂರಾಜು ಅಂಗೀ ತರುವೆನು
ನೀನಳುಬ್ಯಾಡ ಪುಟ್ಟೂರಾಜು ಹೋಗಿಬರುವೆನು

ತುಪ್ಪ ಮಾರಿ ಬರುವೇನೊ ಒಪ್ಪೀದ್ದುಡಂಗಿ ತರುವೆನೊ
ಅಳೂಬ್ಯಾಡ ನಿಂಗೂರಾಜು ಅಂಗೀ ತರುವೆನು
ನೀನಳೂಬ್ಯಾಡ ಪುಟ್ಟೂರಾಜು ಹೋಗಿಬರುವೆನು

ಮೈಸೂರ್ಗ್ಗಾರ ಹೋಗುವೆನು ದಸರಾ ನಿಲಂಗಿ ತರುವೆನೊ
ಅಳೂಬ್ಯಾಡ ನಿಂಗೂರಾಜು ಅಂಗೀ ತರುವೆನು
ನೀನಳೂಬ್ಯಾಡ ಪುಟ್ಟೂರಾಜು ಹೋಗಿಬರುವೆನು

ಹಸುರು ನಿಲಂಗಿ=ಹಸಿರು ಬಣ್ಣದ ನಿಲುವಂಗಿ (ಉದ್ದಾನೆ ಕೋಟು). ಮಳಿಗೇಲಂಗಿ = ಮಳಿಗೆಯಲ್ಲಿ ಮಾರುವ ಅಂಗಿ ; ಅಂಗಡಿಯಲ್ಲಿ ಮಾರುವ ಅಂಗಿ. ದಸರಾ ನಿಲಂಗಿ = ದಸರಾ ಹಬ್ಬದ ನಿಲುವಂಗಿ. ಸಾಮಾನ್ಯವಾಗಿ ಹಿಂದೆ ದಸರಾ ಹಬ್ಬದಲ್ಲಿ ಅವರಲ್ಲಿಯೂ ದರ್ಬಾರಿಗಳು ನಿಲುವಂಗಿ, ಕಮ್ಮರ್‌ಬಂದ್, ಅಡ್ದೊದಿಕೆ ಮತ್ತು ಪೇಟ ಧರಿಸಲೇಬೇಕಾಗಿತ್ತು.

# ಬಳುಂಕೂತ ಬೀದಿ ಮೆರೆದಾಳು

ಹಾಡಿರುವವರು : ಯೂಚೇನಹಳ್ಳಿ ನಿಂಗಮ್ಮ.

ಹಸಿಯಾ ಬೆತ್ತಾದಕೋಲಂದ್ದ ಸನಾದ ಮಲ್ಲೀಗೆ
ಒಂದ್ದ ಸನಾದ ಸಂಪೀಗೆ
ಹಸಿಯುವ್ರಾಡಿದರು ಗರಡಿಲ್ಲಿ ತಂದನ್ನಾ ॥ಪ॥

ಸೀತೆಕೊಳದಲ್ಲಿ ಸೀರೆ ಒಗಿಯುವನ್ನಾರೊ
ದಾತಾಗಿ ಒಗಿಯೋ ಮಡಿವಾಳಿ ತಂದನ್ನಾ– ಹಸಿಯಾ...
ದಾತಾಗಿ ಒಗಿಯೋ ಮಡಿವಾಳಿ ದಂಡಿನವ್ನಾ
ತಾಶೀತೋಳೀನ ರವಕೇಯಂ ತಂದನ್ನಾ– ಹಸಿಯಾ...

ಬಳುಕೂ ನಡುವೀಗೆ ಕುಣಂಕೇಯಂ ಒಡ್ಡುವಾಣ
ಎಣಕೆಯಂ ಚವಲಿ ಹೆಗಲಲ್ಲಿ ತಂದನ್ನಾ– ಹಸಿಯಾ...
ಎಣಕೆಯು ಚವಲಿ ಹೆಗಲಲ್ಲಿ ಮಡಿಯಾಕಂಡು
ಬಳುಕೀತ ಬೀದಿ ಮೆರೆದಾಳು ತಂದನ್ನಾ– ಹಸಿಯಾ...

ದೇವುರ ನೆನೆದಾರೆ ದಾವತ್ತು ನಮಗಿಲ್ಲ
ಆಮೂ ಕಡಂದಾರೆ ಇಸವಿಲ್ಲ ತಂದನ್ನಾ– ಹಸಿಯಾ...
ಆಮೂ ಕಡಂದಾರೆ ಇಸವಿಲ್ಲ ದಂಡಿನಮ್ಮಾ
ನೀನಿದ್ದಮ್ಯಾಲೆ ಭಯವಿಲ್ಲ ತಂದನ್ನಾ– ಹಸಿಯಾ...

ಕರಿಯಾ ಕಡ್ಡಿಯ ಸೀರೆ ಕಣಕಾಲಿಗರುಶಣ
ಕೆಣಕೀನೋಡವಳ ಕಿಡುಗಣ್ಣಿ ತಂದನ್ನಾ– ಹಸಿಯಾ...
ಕೆಣಕೀನೋಡವಳ ಕಿಡುಗಣ್ಣಿ ದಂಡಿನವ್ಳು
ಮರತವ್ರು ಮನಿಯ ಮುರಿದಾಳು ತಂದನ್ನಾ–ಹಸಿಯಾ...

ಇದೇ ಧಾಟಿಯಲ್ಲಿ ಹಾಡಿದ ಇನ್ನಿತರ ನುಡಿಗಳು :

ಪಿಲ್ಲೀಕಾಲಿನೋಳಿ ಪಿರಿಯಾಪಟ್ಟಣದೋಳಿ
ಕಲ್ಲುಮ್ಯಾಲೆ ಕಾಲ ತೊಳಿಯುವ್ನೆ ತಂದನ್ನಾ– ಹಸಿಯಾ...
ಕಲ್ಲುಮ್ಯಾಲೆ ಕಾಲ ತೊಳಿಯುವ್ನೆ ದಂಡಿನವ್ಳು
ನಿನ್ನ ಪಿಲ್ಲೀ ಸಾವುರಕೆ ಬೆಲಿಯಾದೊ ತಂದನ್ನಾ–
ಹಸಿಯಾ...

ಹಿತ್ತಲೂ ಮನಿಯುವ್ನೆ ಹೀರೇಕಾಯ್ನು ನರಿಗ್ಯವ್ನೆ
ಬಿತ್ತಾ ದಾಳಿಂಬಿ ಹಲ್ಲಿನವಳೆ ತಂದನ್ನಾ– ಹಸಿಯಾ...

ಮೂಗುಂತಿ ಮುಂಭಾರ ಎಣಗಂಟು ಹಿಂಭಾರ
ಎಂಟೆಳೆ ಗುಂಡು ಎದಿಭಾರ ತಂದನ್ನಾ– ಹಸಿಯಾ...
ಎಂಟೆಳೆ ಗುಂಡು ಎದಿಭಾರ ದಂಡಿನವ್ಳು
ಸಣ್ಣಂಚಿನ ಸೀರೆ ನಡುಭಾರ ತಂದನ್ನಾ– ಹಸಿಯಾ...

ಮೂಗುತಿ ಮುರುದಾರೆ ಮಾನುಸಾಕೆ ದಂಡಿನವ್ಳು
ಲೋಕಾನಾಳೋನು ನಿನ್ನ ಮಗ ತಂದನ್ನಾ– ಹಸಿಯಾ...
ಲೋಕಾನಾಳೋನು ನಿನ್ನ ಮಗ ದಂಡಿನವ್ಳು
ಮಾಡಿಸಿಕೊಡುವನು ಮೂಗುತಿಯ ತಂದನ್ನಾ ಹಸಿಯಾ...

ಅರಳೀಮರದವಳೆ ದಿರಳೀಯ ಜಡೆಯವಳೆ
ಹನ್ನೆರ್ಡಂಕಣದ ಗುಡಿಯವಳೆ ತಂದನ್ನಾ- ಹಸಿಯಾ...
ಹನ್ನೆರ್ಡಂಕಣದ ಗುಡಿಯವಳೆ ದಂಡಿನಮ್ಮ
ನಿನ್ನಣ್ಣಯ್ಯ ಬತ್ತಾನೆ ಅರಗಾಗೆ ತಂದನ್ನಾ- ಹಸಿಯಾ...

ಬೇವೀನಮರದವಳೆ ಬೆಳ್ಳೀಯ ಜಡೆಯವಳೆ
ಹನ್ನೆರ್ಡಂಕಣದ ಗುಡಿಯವಳೆ ತಂದನ್ನಾ- ಹಸಿಯಾ...
ಹನ್ನೆರ್ಡಂಕಣದ ಗುಡಿಯವಳೆ ದಂಡಿನಮ್ಮ
ನಿನ್ನ ಬೆನ್ನು ಬಾಡೀದೊ ಬಿಸಲೀಗೆ ತಂದನ್ನಾ-ಹಸಿಯಾ...

ಹಸಿಯಾಗ್ವಾಡೆಯ ಮ್ಯಾಲೆ ಹಸೆಯಾ ಬರೆಯುವಳ್ಯಾರೆ
ಹಸಿಯಾದಂಡಿನಮ್ಮ ಸೋಸಿಯೊರು ತಂದನ್ನಾ ಹಸಿಯಾ...
ಹಸಿಯಾ ದಂಡಿನಮ್ಮನ ಸೋಸಿಯೊರು ಹೆಣ್ಣುಮಕ್ಕ
ಹೆಸರೆತ್ತಿ ಹಸಿಯಾ ಬರದಾರು ತಂದನ್ನಾ- ಹಸಿಯಾ...

ದಂಡೀ ಹಬ್ಬಾಕೆ ದಂಡೀಲ್ಹೊಂಬಾಳೆ ಬಂದೊ
ತಿಂಗಳಿಗೆ ನೂರು ಮಂಡೆ ಬೆಂದೊ ತಂದನ್ನಾ- ಹಸಿಯಾ...
ತಿಂಗಳಿಗೆ ನೂರು ಮಂಡೆ ಬೆಂದೊ ದಂಡಿನಮ್ಮ
ದಂಡೀ ನಿನ್ನಬ್ಬ ಐಯಂಭೋಗ ತಂದನ್ನಾ- ಹಸಿಯಾ...

ಹೊಂಬಾಳೆ ಚಂದಲ್ಲೆಂದು ಸಿಂಡಂಬ್ಯಾಡ ದಂಡಿನಮ್ಮ
ಮುಂದಕು ನಿನ್ನ ಮಂಗ ಸಮರಂಥ ತಂದನ್ನಾ-ಹಸಿಯಾ...
ಮುಂದಕು ನಿನ್ನ ಮಂಗ ಸಮರಂಥನಾದಾರೆ
ದಂಡಿಲ್ಹೊಂಬಾಳೆಯ ತರುವನು ತಂದನ್ನಾ- ಹಸಿಯಾ...

ತಾಯಿ ದಂಡಿನಮ್ಮನ ತಾಲಿ ಮಾಡಿದವರ್ಯಾರೆ
ಏಳೂರು ವಾಜ ಎಸಲೊಡ್ಡಿ ತಂದನ್ನಾ- ಹಸಿಯಾ...
ಏಳೂರು ವಾಜ ಎಸಲೊಡ್ಡಿ ಮಾಡಿದ ತಾಲಿ
ಏಳೂರಿಗೆಲ್ಲ ಹೆಸರಾದೊ ತಂದನ್ನಾ- ಹಸಿಯಾ...

ತಾಯಿ ದಂಡಿನಮ್ಮನ ತಾಲೀಯ ಬೆಳಕೀಗೆ
ಏಳೂರು ಹುಲ್ಲೆ ಬೆದರೀದೊ ತಂದನ್ನಾ- ಹಸಿಯಾ...
ಏಳೂರು ಹುಲ್ಲೆ ಬೆದರಿ ಬೆಟ್ಟವ ಸೇರಿ
ಒಪ್ಪತ್ತಿನ ಮೇವ ಮರತಾವು ತಂದನ್ನಾ- ಹಸಿಯಾ...

ಕೊಂಡಾದಬಂಡಿ ಬಂದೊ ಕೊಂಡಕು ಸೌದೆ ಬಂದೊ
ಕೊಂಡಾಹಾಯೋನ ಮಂಗ ಬಂದ ತಂದನ್ನಾ-ಹಸಿಯಾ...
ಕೊಂಡಾಹಾಯೋನ ಮಂಗ ಬಂದ ದಂಡಿನಮ್ಮ
ನಿನ್ನ ಕೊಂಡಹಾಯ್ವ ಮಂಗ ಬಂದ ತಂದನ್ನಾ-ಹಸಿಯಾ...

ಹಸಿಯಾ ಹಣಸೇಯಸೌದೆ ರಸವುಕ್ಕಿ ಬೇಯ್ವಾಗ
ಹುಸಿನಗುಮಮ್ಮ ಗಂಡಿಯಲ್ಲಿ ತಂದನ್ನಾ- ಹಸಿಯಾ...
ಹುಸಿನಗುಮಮ್ಮ ಗಂಡಿಯಲ್ಲಿ ದಂಡಿನಮ್ಮ
ಹಸುಮಕ್ಕ ಕೊಂಡ ಹಾಯ್ವಾಗ ತಂದನ್ನಾ- ಹಸಿಯಾ...

ಕಾಸೆ ಕಟ್ಟುವಾಗ ಆಕಾಸ ನಡುಗೀದೊ
ಆಕಾಸ್ದ ಗಾಳಿ ಅಳುತಾವೆ ತಂದನ್ನಾ- ಹಸಿಯಾ...
ಆಕಾಸ್ದ ಗಾಳಿ ಅಳುತಾವೆ ದಂಡಿನಮ್ಮ
ನೀನು ಕಾಸೆ ಕಟ್ಟೊವ ರವಸೀಗೆ ತಂದನ್ನಾ- ಹಸಿಯಾ...

ಹಸಿಯವ್ಕಾಡಿದರು=ಹಸುಮಕ್ಕಳು ಆಡಿದರು. ದಾತಾಗಿ=ಚೆನ್ನಾಗಿ ; ಮಡಿಯಾಗಿ. ತಾತಿ=ತಾಯಿತಿ ; ದೃಷ್ಟಿ ಪರಿಹಾರಕ್ಕಾಗಿ ತೋಳು ಅಥವಾ ಸೊಂಟಕ್ಕೆ ಕಟ್ಟಿದ ಉದ್ದನೆಯ ಕೊಳವೆ. ಬಳುಕೂ=ಬಳುಕುವ. ಕುಣುಕೆಯ=ಕುಣಿಕೆಯು ; ಜೋಡಿಸಲು ಅಥವಾ (ದನ) ಕಟ್ಟಿ ಹಾಕಲು ಮಾಡಿದ ಉಂಗುರದಂತಹ ಕುಣಿಕೆ. ಎಣಕೆಯ = ಹೆಣೆದ. ಮಡಿಯಾಕಂಡು = ಮಡಗಿಕೊಂಡು. ಬಳಿಕೀತೆ=ಬಳುಕೂತೆ. ದಾವತ್ತು=ಕಷ್ಟ. ಆವೂ=ಹಾವು. ಇಸ=ವಿಷ. ಎಣಗಂಟು=ಎಣೆಗಂಟು ; ತಲೆಗೂದಲನ್ನು ಎಡಕ್ಕೆ ಮಾಡಿ ಕಟ್ಟಿರುವುದು (?) ಜಡೆ ಹೆಣೆದ ಗಂಟು ; ತಲೆಗೂದಲನ್ನು ಹಿಂದಕ್ಕೆ ಕಟ್ಟಿರುವುದು. ಅರಗಾಗು=ಮುಗ್ಗಲಾಗು. ಹೆಸರೆತ್ತಿ=ಹೆಸರು ಹೇಳಿ. ದುಂಡಿ=ಬಹಳ ಗಡುಸಾದವಳು. ದಂಡೀಲಿ=ದಂಡಿಯಲ್ಲಿ ; ಜನರನ್ನು ಹೊತ್ತು ಸಾಗಿಸುವ ಒಂದು ಸಾಧನ. ವಾಜ=ಅಕ್ಕಸಾಲಿಗ. ಎಸಲೊಡ್ಡಿ = ಮಿರುಮಿರುಗುವಂತೆ ಮಾಡಿದ ಅಥವಾ ಹೂವಿನ ಎಸಳುಗಳನ್ನು ಬಿಟ್ಟ.

# ಚಿಕ್ಕೋಳೆ ಚಿತರಂಗಿ
# ದೊಡ್ಡೋಳೆ ರತುನಾಜಿ

ಹಾಡಿದವರು : ನಾರನಹಳ್ಳಿ ರಂಗವ್ಮ ಮತ್ತು
ಗಂಗವ್ಮ

ಚಿಕ್ಕೋಳೆ ಚಿತರಂಗಿ ದೊಡ್ಡೋಳೆ ರತುನಾಜಿ
ರತುನಾಜಿ ಹೊಟ್ಟೆವಳಗೆ ಹುಟ್ಟ್ಯಾನೆ ಸಾರಂಗಧರ
ಅಪ್ಪಾದ ಇಪ್ಪಾದ ಅಷ್ಟಪಾಲಿಕುನಾದ
ಗೋಲಿ ಚೆಂಡುಗಳಾಡೋ ಆಡುವಂತ ಮಗನಾದ

ಏನವ್ಮಾ ನನ್ನ ತಾಯಿ ಹೆತ್ತೋಳೆ ನನ್ನ ತಾಯಿ
ನನ್ನ ವಾರೀಗ್ಹುಡುಗರು ಚಂಡಾಡಂತಾರವ್ಮ

ತಿಳಿಯಾದ ಕಂದಾಗೆ ಯಾರಪ್ಪ ಹೇಳಿದೋರಂ
ತಿಳಿಯಾದ ಬಾಲಾಗೆ ಯಾರಯ್ಯ ಹೇಳಿದೋರು
ಬ್ಯಾಡಪ್ಪ ಎಲೆ ಮಗನೆ ಮಗನೆ ಸಾರಂಗಧರ
ಬೀದಿವಳಗೆ ಚೆಂಡಿನ್ನ ನೀನಾಡುಬೇಡವಯ್ಯ
ಬೀದಿವಳಗಾಡೋದರ ಬದಲು ನಮ್ಮರಮನೆ
ಮುಂದುಗಡೆ
ಅರಮನೆ ಮುಂದುಗಡೆ ಆಡಯ್ಯ ನನ್ನ ಕಂದ

ಕೆಟ್ಟ ಸ್ವಪನ ಕಂಡೆನಂ ಮಂಗನೆ ಕೇಡು ಸ್ವಪನ
ಕಂಡೆನಂ ಮಂಗನೇ
ಬೀದಿವಳಗೆ ಚಂಡಿನ್ನ ನೀನಾಡುಬೇಡಯ್ಯ
ಬ್ಯಾಡಪ್ಪ ಎಲು ಮಂಗನೆ ಮಂಗನೆ ಸಾರಂಗಧರ
ತಾಯಿ ಮಾತ ಕೇಳದೊನಿಗೆ ನಾಯಿಪಾಡಂ
ಬತ್ತದೊ ಮಂಗನೆ

ಅದಂ ಎಂತ ಕೆಟ್ಟ ಸ್ವಪನ ಅದಂ ಎಂತ ಕೆಟ್ಟ ಸ್ವಪನ
ಹೆತ್ತೋಳೆ ನನ್ನ ತಾಯಿ ನನ್ನ ಕೂಡ ಹೇಳಮ್ಮ

ತಂದೆ ರಾಜ್ಯದ ದೊರೆಗೆ ಶಪರಿ ಬಂತಲ್ಲೋ ಮಂಗನೆ
ನಿನ್ನ ಚಿಗವ್ವನೆಂಬೋಳು ಏನ ಮಾಡುಂತಾಳೊ ಮಗನೆ
ನೀನಾಡೊ ಚಂಡಿನ್ನ ಪಂಚ್ಚಿಮಡಗುಂತಾಳೊ ಮಂಗನೆ
ಆಡಂದ ಅಡಿವ್ಯಾಗೆ ಕಾದ ಬಂಡೆಯ ಮೇಲೆ
ಕೈಯ್ಯಂಗ್ಳ ಕಾಲಂಗ್ಳ ಕಡಿಸ್ಯಾಳು ನನ್ನ ಮಂಗನೆ

ಏನಮ್ಮ ನಮ್ಮ ತಾಯಿ ಎಂತ ಮಾತಾಡತೀಯಂ
ತಂದೀಗೆ ಬಂದೋಳಂ ತಾಯಲ್ಲವೇನಮ್ಮ

ಚಿಕ್ಕೋಳೆ ಚಿತರಂಗಿ ದಂಡಿನ ಶಪರಿ ಬಂದೊ
ದಂಡೀಗೆ ಹೋಗಬೇಕು ಬ್ಯಾಗನೆ ಅಡಿಗೆ ಮಾಡ್ಹೆಣ್ಣೆ

ಕೊಪ್ರಿ ಕೊಪ್ರಿ ನೀರ ಕಾಸಿ ಮಂಊಗಳ ಸೀಗೆ ಕಾಯ್ಹುರದಂ
ಅವಳಂ ಪಾಲು ಪಂಚಾವಂದಡಿಗೆ ಬ್ಯಾಗದಿಂದ ಮಾಡ್ಯಾಳಂ

ಪಾಲಂ ಪಂಚಾಮಂದಡಿಗೆ ಅವಳಂ ಬ್ಯಾಗದಿಂವ ಮಾಡ್ಯಾಳಂ
ಅವಳು ಹಪ್ಪಳದುಂಪ್ಪಿನಕಾಯಿಂ ಒಪ್ಪದಿಂದ ಹಾಕಿ
ಬ್ಯಾಗಾ ಬ್ಯಾಗಾನವಳು ಬಂತ್ರೀಯಂ ಕಟ್ಯಾಳು
ನೀರಾನೆ ತಂದಾಳು ಊಟಾವ ಮಾಡ್ಯಾರಂ
ಊಟಾವ ಮಾಡಿನ್ನ ಈಳ್ಯೀವ ಮೆಲುವಾರು

ಏನಂ ಸ್ವಾಮಿ ದೊರಿಗಳಿರ ನೀವಾದರ್ಹೋಗಂತೀರ
ನೀವಾದರ್ಹೋಗಂತೀರಾ ಅರಮನೆ ವಳಗಿನ್ನು
ಅರಮನೆ ವಳಗಿನ್ನು ಒಬ್ಬಾಳೆ ಹ್ಯಾಗಿರಲಿ

ದಂಡಂ ದಳವಾಡವದೆ ನಿನಗೇನೆ ಭಯವು
ಮಂದಿ ಮಾರ್ಬಲವದೆ ನಿನಗೇನೆ ಭಯವು
ನಿಮ್ಮಕ್ಕ ರತುನಾಜಿ ಅವಳ ಮಗ ಸಾರಂಗಧರವನೆ
ಮಗ ಸಾರಂಗಧರವನೆ ನಿನಗೇನೆ ಭಯವು

ಇಲ್ಲಿಂದ ಧಾಟಿ ಬದಲಾವಣೆಯಾಗುತ್ತದೆ

ದೂರದ ದಂಡೀಗೆ ನೀವಿನ್ನು ಹೋಗತೀರ
ನೀವಿನ್ನು ಹೋಗತೀರ
ನೀವಿನ್ನು ಹೋಗತೀರ ನನಗೇನಂ ಗತಿಯಂ
ನನಗೇನಂ ಗತಿಯಂ

ಅರಮನೆ ಮುಂದುಗಡೆ ಮಲ್ಲಿಗಂಟೊಂದ್ಹಾಕ್ಹೆಣ್ಣೆ
ಮಲ್ಲಿಗಂಟೊಂದ್ಹಾಕ್ಹೆಣ್ಣೆ

ದಿನವ್ಹೋಗಿ ದಿನವು ನೀರ್ಹುಯ್ಯೆ ಹೆಣ್ಣೆ
ದಿನವೋಗಿ ದಿನವು ನೀರಾನೆ ಹುಯ್ದಾರೆ
ನೀರ್ಹೊಯ್ದಾಂತ ಗಿಡವು ಕಳ ಳ ಅನ್ನುತಾದೆ
ಕಳ ಕಳ ಅನ್ನದಲೆ ಸೊರಗಿ ಹೋದಾರೆ
ಬಾಡಿ ಬತ್ತಿ ಹೋದಾರೆ
ನಮ್ಮ ದೊರಿಯಿಲ್ಲವೆಂದು ನೀನು ತಿಳಕೋಳೆ

ಕುದುರೇಯು ಹಿಡಿದಾನು ಲಗಾಮು ಬಿಗುದಾನು
ಲಗಾಮು ಬಿಗುದಾನು
ಕುದುರೆಯು ಮೇಲ್ಹೊರುಟಾನು ದಂಡಿಗಪ್ಪಯ್ಯ

ಅವನತ್ತಾಲ ಕಳಿಸಿನ್ನ ಅರಮನಿಗೆ ಬಂದಾಳೆ
ಅರಮನಿಗೆ ಬಂದಾಳೆ
ಅರಮನೆ ಬಾಕಲಾಗೆ ಕೂತಗಂಡು ಚಿತರಂಗಿ
ಕೂತಗಂಡು ಚಿತರಂಗಿ
ಸುತ್ತಲ ದೇವರಿಗೆಲ್ಲ ಹರಕೆ ಮಾಡುತಾಳೆ
ಅವನಾಡೊ ಚೆಂಡಿನ್ನ ನನ್ನರಮನಿಗೆ ಬಂದಾರೆ
ನನ್ನರಮನಿಗೆ ಬಂದಾರೆ
ಕಲ್ಲೆಂಬೊ ದೇವರಿಗೆ ಪೂಜೆ ಕಟ್ಟಿಸೇನು
ಕಲ್ಲೆಂಬೊ ದೇವರಿಗೆ ಪೂಜೆಯು ಕಟ್ಟಿಸೇನು
ಪೂಜೆಯು ಕಟ್ಟಿಸೇನು
ಅವಳುಗಂತ ಹರಕೆಯ ಮಾಡುತಾಳೆ ಚಿತರಂಗಿ

ಅಮ್ಮಾ ಅಮ್ಮಾ ನಮ್ಮ ತಾಯಿ ಹೆತ್ತೋಳೆ ನಮ್ಮ ತಾಯಿ
ಹೆತ್ತೋಳೆ ನಮ್ಮ ತಾಯಿ
ನನ್ನ ವಾರೀಗ್ಹುಡುಗರೆಲ್ಲ ಬೀದೀಲಿ ಬಾಲಾಡಂತಾರೆ

ಬ್ಯಾಡಪ್ಪ ನನ್ನ ಮಗನೆ ಬ್ಯಾಡಯ್ಯ ಸಾರಂಗ
ಬ್ಯಾಡಯ್ಯ ಸಾರಂಗ
ನನ್ನ ಮಾತ ಕೇಳಯ್ಯ ಮಗನೆ ಸಾರಂಗ

ಅವಳೆಷ್ಟನ್ನ ಹೇಳಿದರೆ ಕೇಳಲಿಲ್ಲ ಸಾರಂಗ
ಕೇಳಲಿಲ್ಲ ಸಾರಂಗ
ಅವನು ಬೀದಿಲ್ಲಿ ಬಾಲನ್ನಾಟವ ಆಡಿದನು

ವಾರಿಗ್ಹುಡುಗರು=ವಾರಿಗೆ ಹುಡುಗರು ; ಸಮವಯಸ್ಸಿನ ಗೆಳೆಯರು. ಚಿಗವ್ವ=ಚಿಕ್ಕವ್ವ. ಕೈಯಂಗ್ಲ ಕಾಲಂಗ್ಲ=ಕೈಕಾಲು ಗಳನ್ನು. ಕೊಪ್ರಿ ಕೊಪ್ರಿ=ಕೊಪ್ಪರಿಗೆ ಕೊಪ್ಪರಿಗೆ ; ದೊಡ್ಡ ದೊಡ್ಡ ಹಂಡೆಗಳು. ಪಾಲುಪಂಚಾಮ=ಹಾಲಿನಲ್ಲಿ ಮಾಡಿದ ಐದು ಬಗೆಯ ಭಕ್ಷ್ಯ. ಮಲ್ಲಿಗಂಟೊಂದ್ಹಾಕ್ಹೆಣ್ಣೆ = ಮಲ್ಲಿಗೆ ಅಂಟು ಹಾಕು ಹೆಣ್ಣೆ. ಸಾಮಾನ್ಯವಾಗಿ ಪ್ರಾಣಕ್ಕೆ ಅಪಾಯ ಇರುವ ಯುದ್ಧ, ಬೇಟೆ ಮುಂತಾದವುಗಳಿಗೆ ಹೊರಟಾಗ ಅವು ಗಳಲ್ಲಿ ಬದುಕಿ ಬರುವನೋ ಇಲ್ಲವೊ ಎಂದು ತಿಳಿದುಕೊಳ್ಳಲು ಈ ಸಂಕೇತವನ್ನು ಹೇಳಲಾಗುತ್ತದೆ. ಪೂಜೆ ಕಟ್ಟಿಸೇನು=ದೇವರ ವಿಗ್ರಹಕ್ಕೆ ವಿಶೇಷವಾದ ಅಲಂಕಾರ ಮಾಡಿ ಬಹು ಭಕ್ತಿಯಿಂದ ಮಾಡುವ ಪೂಜೆ. ಬಾಲಾಡುತಾನೆ = ಬಾಲನ್ನು ಆಡುತ್ತಾನೆ. ಚೆಂಡಿನ ಬದಲು ಇಂಗ್ಲಿಷ್‌ನ 'ಬಾಲ್' ಪದವನ್ನು ಸಲೀಸಾಗಿ

ಉಪಯೋಗಿಸಿಕೊಂಡಿದ್ದಾರೆ ಹಾಡುಗಾತಿಯರು. ಹಳ್ಳಿಯ ಹಾಡುಗಾರರು ಹಿಂದು ಮುಂದು ನೋಡದೆ ಬೇರೆ ಭಾಷೆಯ ಪದಗಳನ್ನು ಕನ್ನಡವನ್ನು ಉಪಯೋಗಿಸಿಕೊಳ್ಳುವಷ್ಟು ಸಲೀಸಾಗಿ ಉಪಯೋಗಿಸುತ್ತಾರೆ. ಬಾಲ್, ಬೆಂಚು, ಕುರ್ಚಿ, ಫೋಟೊ, ಹ್ಯಾಟು, ಕೋಟು, ಶರಟು ಇತ್ಯಾದಿ ಪದಗಳು ಆಗಲೇ ನಮ್ಮ ಜನಪದ ಗೀತೆಗಳಲ್ಲಿ ಬಂದಿವೆ.

# ತಿಂಗುತಿಂಗಳಿಗೂ
# ತಿಂಗಳುಮಾವನ ಪೂಜೆ

ಹಾಡಿರುವವರು :  ಕಣಿಕಲ್ಕೆರೆ  ನಿಂಗಮ್ಮ
ಮತ್ತು ಸಂಗಾತಿಯರು.

ಮರಳಲ್ಲಾಡ್ಯಾನೆ ಮಳಿರಾಯ ಮಾಲಿಂಗ
ಹೂವಿನೊನದಲ್ಲಾಡ್ಯಾನೆ ||ಪ||

ತಿಂಗುತಿಂಗಳಿಗೂ ತಿಂಗಳಮಾವನ ಪೂಜೆ
ಗರುಂಡಾನ ಪೂಜೆ ಘನಪೂಜೆ ಮರಳ...
ಗರುಂಡಾನ ಪೂಜೆ ಘನಪೂಜೆ ಈ ಊರ
ಹನುಮಯ್ನ ಪೂಜೆ ಅನುಗಾಲ ಮರಳ...

ಒಂದೊರ ಕೊಟ್ಟೇವು
ಒಂದ್ಹಣ ಕೊಡಿರಮ್ಮ
ಕಾವೇಟೀ ರಂಗನಿಗೆ
ಕಸ್ತೂರಿ ರಂಗನಿಗೆ
ಸಣ್ಣ ಸರಪನ ಮ್ಯಾಲೆ
ಶಯನ ಮಾಡಿಸಿಕೊಂಡು
ಅಪ್ಪಾ ರಂಗಯ್ನನ
ಮಗನೀಗೊಂದು

ಹೆಣ್ಣು ಕೊಡಿರಮ್ಮ
ಹೆಣ್ಣು ಕೊಡಿರಮ್ಮ

ಹಾಸದೇ ಹಾಸಣಿಗೆ
ಬೀಸದೇ ಬೀಸಣಿಗೆ
ನೀರು ತರುವುದು ಗಿಂಡಿ
ನಿದ್ರೆ ಮಾಡೋದು ಮಂಚ
ಒತ್ತದೇ ಹರಳೆಣ್ಣೆ
ಒರಗದೇ ಸಣ್ಣಮಂಚ
ಚಿಟ್ಟುಂಡೇಕಾಯಿ
ಚಿಲಕಾದ ಮಲಕಾದ
ಚಿಕ್ಕರಸಿ ಮಲ್ಲೊಂದು
ಹೆಣ್ಣೆಲ್ಲವಮ್ಮ
ಹೆಣ್ಣೆಲ್ಲವಮ್ಮ

ಹೀಗೆ ಎರಡು, ಮೂರು, ನಾಲ್ಕು ವರಹ ಕೊಡುತ್ತೇವೆಂದರೂ ಹೆಣ್ಣಿನವರು ಹೆಣ್ಣು ಕೊಡಲು ಒಪ್ಪದೆ ಐದು ವರಹ ಕೊಡುತ್ತೇವೆಂದಾಗ ಒಪ್ಪುತ್ತಾರೆ :

ಐದೂರ ಎಂಬೋದು
ಏನಮ್ಮ ಮಂಗಳೀಗೆ
ಎಂತಮ್ಮ ಮಂಗಳೀಗೆ
ಹಾಸದೇ ಹಾಸಣಿಗೆ

ಬೀಸದೇ ಬೀಸಣಿಗೆ
ನೀರು ತರುವುದು ಗಿಂಡಿ
ನಿದ್ರೆ ಮಾಡೊದು ಮಂಚ
ಒತ್ತೊದೇ ಹರಳೆಣ್ಣೆ
ಒರಗೊದೇ ಸಣ್ಣ ಮಂಚ
ಚಿಟ್ಟುಂಡೆಕಾಯಿ
ಚಿಲಕಾದ ಮಲಕಾದ
ಚಿಕ್ಕರಸಿ ಮಲ್ಲಿ
ಹೆಣ್ಣಯ್ತೆವಮ್ಮ
ಹೆಣ್ಣಯ್ತೆವಮ್ಮ

ಒಂದೊರ=ಒಂದು ವರಹ ; ಹಿಂದಿನ ಕಾಲದ ಚಿನ್ನದ ನಾಣ್ಯ. ಸರಪನ ವ್ಯಾಲೆ=ಸರ್ಪನ ಮೇಲೆ. ಚಿಟ್ಟುಂಡೆಕಾಯಿ ಚಿಲುಕಾದ ಮಲಕಾದ=ಹೊಲಗಳಲ್ಲಿ ಬಳ್ಳಿಯಾಗಿ ಹಬ್ಬಿ ಸಣ್ಣಗೆ ದುಂಡಗೆ ಬೆಳೆಯುವ ಕಾಯಿಯೇ ಚಿಟ್ಟುಂಡೆಕಾಯಿ. ಇಂತಹ ಚಿಟ್ಟುಂಡೆಕಾಯಿಯಂತಹ ಮೊಲೆಯುಳ್ಳ ಹೆಣ್ಣು. ಆ ಹೆಣ್ಣು ಚಿಲಕದಂತಹ ಮೊಲೆಕಟ್ಟು ಕಟ್ಟಿಕೊಂಡಿದೆ. ಅಂದರೆ ಅದು ತೀರಾ ಚಿಕ್ಕ ಹುಡುಗಿ ಎಂದರ್ಥ ಇರಬಹುದೇ ? ಹೆಣ್ಣಯ್ತೆವಮ್ಮ= ಹೆಣ್ಣು ಇದೆ ಅಮ್ಮ.

# ಹೂವ್ನ ಕುಯ್ಯ್ಯನಿ ಬನ್ನಿ

ಹಾಡಿರುವವರು : ಬನ್ನೂರು ಕೆಂಪಮ್ಮ ಮತ್ತು ಸಂಗಾತಿಯರು.

ಹುವ್ವಾ ಕುಯ್ಯ್ಯನಿ ಬನ್ನಾ ಮಾಗ್ಗಾ ಕುಯ್ಯಾನಿ ಬನ್ನಾ
ಮುಗ್ಗೀಸಮ್ಯಾಲೆ ಕರಿಯಂಪ್ಪ ಪರಿಗ್ಯವ್ರೆ
ನೋಡಿ ಕುಯ್ಯ್ಯಾನ ಬನ್ನಾ ॥ಪ॥

ಕಡಜಾನ ಗೂಡಿನಂಗೆ ಇಡುಕಪ್ಪ ನಿಮು ಮಂಠ
ಕಡದು ಗೇದವರೆ ಕಲ್ಲಾ ಕಂಬ ಹುವ್ವಾ...
ಕಡದು ಗೇದವರೆ ಕಲ್ಲಾ ಕಂಬ ಮಾಗುರುವೇ
ಮಡದು ಮುಡ್ಯವರೆ ಮಂಠದಲ್ಲಿ ಹುವ್ವಾ...

ಹಾಡಿರಿ ರಾಗಗಳ ತೂಗೀರಿ ದೀವಿಗೆಯಾ
ಸ್ವಾಮಿ ಕರಿಯಂಪ್ಪನ ಬಾಗಾಲ ಮುಂದೆ
ಉರಿದಾವು ಎನ್ನಾ ದೀವೀಗೆ ॥ಪ॥

ಅತ್ತೀಯು ಬೀಳನಾಗೆ ಹೊತ್ತವರೆ ಕುರುಜಡೆಯು
ಸುತ್ತಾ ಕೂತವರೆ ಮುನಗಳು ಹಾಡಿರಿ...
ಸುತ್ತಾ ಕೂತವರೆ ಮುನಗಳು ಮಾಗುರುವೆ
ಸುತ್ತಾ ದೀವೀಗೆ ಬೆಳಕಲ್ಲಿ ಹಾಡಿರಿ...

ಆಲಾದ ಬೀಳನಾಗೆ ಇಳೇಬಿಟ್ಟು ನಿಮ್ಮ ಜಡೆ
ಕಾದು ಕುಂತವರೆ ಮುನಿಗಳು ಹಾಡಿರಿ...

ಗುರುವೀನ ಕಾಣಾದೆ ಮರಿಯಾದಿ ಮಂಕಾದೆ
ಅರುಳುಮಾದೇವ್ನ ಎಲಿಯಾದೆ ಹಾಡಿರಿ...
ಅರುಳುಮಾದೇವ್ನ ಎಲಿಯಾದಿ ಮಾಗುರುವೆ
ಪಾದುಕೆ ಪಚ್ಚೇಯು ಮಣಿಯಾದೆ ಹಾಡಿರಿ...

ಕಲ್ಯಾಣಿ ಕೊಳದಲ್ಲಿ ವಲ್ಲೀಯು ಮಡಿಮಾಡಿ
ನೆಲ್ಲಕ್ಕಿ ಪಾದಾ ನೆನ ನೆನದು ಹಾಡಿರಿ...
ನೆಲ್ಲಕ್ಕಿ ಪಾದಾವ ನೆನ ನೆನದು ಮಡಿಕೊಂಡು
ಅರಿಯೇ ಕರಿಯಪ್ಪನ ಹಾಡಿರಿ...

ಅಪ್ಪಾನ ಕಂಡು ನಿಚ್ಚ ಪೂಜೆಯು ಮಾಡಿ
ಹೆಚ್ಚೀನ............ ಹಾಡಿರಿ...
ಹೆಚ್ಚೀನ............ ಮರತು
ಸ್ವಾಮಿ ಕರಿಯಪ್ಪನ ಮಠದಲ್ಲಿ ಹಾಡಿರಿ...

ನಮ್ಮಯ ಗುರಿ ಒಂದೇ
ನಮ್ಮಯ ಗುರಿ ಒಂದೇ ॥ಪ॥

ಹುಟ್ಟಿದ ನಿರುವಾಣ ಹುಡುಗರ ಸಂಗಾಟ
ಒಬ್ಬೊಬ್ಬೇಗುಂಟ ತಿರಗವ್ರೆ ತಿರಗವ್ರೆ ನಮ್ಮಯ...
ಒಬ್ಬೊಬ್ಬೇಗುಂಟ ತಿರಗವ್ರೆ ತಿರಗವ್ರೆ ಮಾಗುರುವೇ
ಸಿಕ್ಕದೋರ ಮಲ್ಲಿ ಶಿವಪೂಜೆ ಶಿವಪೂಜೆ ನಮ್ಮಯ...

ಬನ್ನಿ ಕರಿಯಪ್ಪಾ ಕೊನ್ನಿ ಪಾದಕೆ ನೀರ
ವಲ್ಲೇನು ಮಗಳೇ ಲಸವಿಲ್ಲ ಲಸವಿಲ್ಲ ನಮ್ಮಯ...
ವಲ್ಲೇನು ಮಂಗಳೇ ಹಸವಿಲ್ಲ ಈಸ್ವರನ
ನನ್ನ ಅಂಗಳದಲ್ಲಾವೆ ಒಂಗಿಕಾಣೆ ಬಂಗಿಕಾಣೆ ನಮ್ಮಯ...

ಒಂಗಿ ಕಂಡದೋರು ಅಂಗದಲ್ಲಿ ವರಗಿದ್ದರು
ಅಂಗಾಂಗವೆಲ್ಲಾ ಲಿಂ-ವಾದೊ ಲೀಗವಾದೊ ನಮ್ಮಯ...
ಅಂಗಾಂಗವೆಲ್ಲಾ ಲಿಂಗವಾದೊ ಮಾಗುರುವೇ
ನಿನಗೆ ಮಂಗಳಾರತಿ ಲದನ್ನೈದು ಲದನ್ನೈದು ನಮ್ಮಯ...

ತುಂಬೆಯ ಕೊಳದಲ್ಲಿ ಒಂಬೈನೂರು ಗುರುಗಳು
ಮುಂದೆ ಬರುವವರು ಇವರ್ಯಾರು ಇವರ್ಯಾರು
ನಮ್ಮಯ...
ಮುಂದೆ ಬರುವವರು ಇವರ್ಯಾರು ಇವರ್ಯಾರು ಮಾಗುರುವೆ
ನಿನಗೆ ತುಂಬೇ ಹೂವಿಕ್ಕಿ ಶರಣಂದೆ ಶರಣಂದೆ
ನಮ್ಮಯ...

ಸ್ವಾಮಿ ನೆನದಾರೆ ನಮ್ಮ ಜೀವಕೆ ದಣವಿಲ್ಲ
ಹಾವು ಕಡಿದಾರೆ ವಿಸವಿಲ್ಲ ವಿಸವಿಲ್ಲ ನಮ್ಮಯ...
ಹಾವು ಕಡಿದಾರೆ ವಿಸವಿಲ್ಲ ವಿಸವಿಲ್ಲ ಮಾಗುರುವೆ
ಸ್ವಾಮಿ ನಮ್ಮ ಮ್ಯಾಲೆ ದಯವಿರಲಿ ದಯವಿರಲಿ
ನಮ್ಮಯ...

ಐದಂ ಸೇರಕ್ಕೀಗೆ ಐದಂ ಸೇರು ಹಾಲ ಹೂದು
ಕಾಳಂದಿತನಗಂಟ ಎಲೆ ಹಾಸಿ ಎಲೆ ಹಾಸಿ   ನಮ್ಮಯ್ಯ...
ಕಾಳಂದಿತನಗಂಟ ಎಲೆ ಹಾಸಿ ಉಂಡವರೆ
ನಮ್ಮ ಸ್ವಾಮಿ ಕರಿಯಪ್ಪನ ಮಠದಲ್ಲಿ ಮಠದಲ್ಲಿ
ನಮ್ಮಯ್ಯ...

ಹತ್ತುಮಣಕ್ಕೀಗೆ ಹತ್ತು ಮಣ ಹಾಲೂದು
...ತನಗಂಟ ಎಲೆಹಾಸಿ ಎಲೆಹಾಸಿ   ನಮ್ಮಯ್ಯ...
...ತನಗಂಟ ಎಲೆಹಾಸಿ ಉಂಡವರೆ
ನಮ್ಮ ಸ್ವಾಮಿ ಕರಿಯಪ್ಪನ ಮಠದಲ್ಲಿ ಮಠದಲ್ಲಿ
ನಮ್ಮಯ್ಯ...

---

ಬನ್ಯಾ=ಬನ್ನಿ. ಇತುಕಪ್ಪ=ಕಿರಿಮುಕಾಣಪ್ಪ. ಮಡದುಮೂಡ್ಯ ವರೆ=ಅಲ್ಲೇ ಹುಟ್ಟಿದ್ದು. ಬೀಳನಂಗೆ=ಬಿಳಲಿನಹಾಗೆ. ಕುರು ಜಡೆಯ=ಸಣ್ಣ ಜಡೆಯನ್ನು. ಮುನಗಳು=ಮುನಿಗಳು ; ಸಾಧು ಸಂತರು. ಎಲಿಯಾದಿ = (?) ನಿರುವಾಣು = ನಿರ್ವಾಣ. ಸಂಗಾಟ = ಜೊತೆಯ.ಲ್ಲಿ. ಒಬ್ಬೊಬ್ಬಿಗುಂಟ = ಬೇಲಿಯಿಂದ ಬೇಲಿಗೆ. ಕೊನ್ನಿ=ಕೊಳ್ಳಿ ; ತಕ್ಕೊಳ್ಳಿ. ಸಸವಿಲ್ಲ=ಹಸುವಿಲ್ಲ. ಅಂಗಳದಲ್ಲಾವೆ ಬಂಗಿ ಕಾಣೆ = ನಾವು ಬಂಗಿ ಸೇವಿಸಿದ್ದೀವಿ. ಲದನೈದು= ಹದಿನೈದು. ಕಾಳಂದಿತನಗಂಟ= (?) ಎಲೆಹಾಸಿ = ಊಟಕ್ಕೆ ಎಲೆ ಹಾಕಿ.

# ಸುವ್ವಕ್ಕಾ ಸುವ್ವನಾರೀ ಹಾಕ ವಯ್ಯಾರಿ

ಹಾಡಿದವರು : ಮಧುರಾಬಾಯಿ ಶರ್ಮಾ
ಮತ್ತು ಸಂಗಾತಿಯರು

ಹಾಕ ವಯ್ಯಾರಿ ||ಪ||

ಸುವ್ವಕ್ಕಾ ಸುವ್ವನಾರಿ ಹೆಗಲ ಮ್ಯಾಲಿನ ಕೋರಿ
ಹಾರಿಹೋಯಿತವ್ವ ಹರದಾರಿ ನಾರಿ – ಹಾಕ.

ಓಮನೆಂದು ಕುಟ್ಟುವೆ ಸೋಮನೆಂದು ಬೀಸುವೆ
ಓಮು ಸೋಮು ಎರಡೂ ತಿಳಿಯಬೇಕ ನಾರಿ – ಹಾಕ.

ಕುಟ್ಟಿ ಕುಟ್ಟಿ ನನ್ನ ರಟ್ಟೆಲ್ಲ ನೊಂದಾವು
ಕಟ್ಟೆಮ್ಯಾಲಿನ ಕಲ್ಲು ಸಡಲ್ಯಾವ ನಾರಿ – ಹಾಕ.

ಚುಂಚೋಳಿ ದಶಮುಖ ಮಾತೀಲಿ ಸಮರಸ
ಮಾಲ ಕಟ್ಟಿಸ್ಯಾನ ಮುಲಕೀಲಿ ನಾರಿ – ಹಾಕ.

ತಂಗೀಗಿ ತವರೂರ ಮನಿಯಾಗಿ ಅಣ್ಣಯ್ಯ
ನನ್ನ ಚುಂಚೋಳೀಗಿ ದೂರಿಯಾಗಿ ನಾರಿ – ಹಾಕ.

ಅಕ್ಕಿ ಚೀಲದ ಮ್ಯಾಲೆ ಲೆಕ್ಕಮಾಡುವನ್ಯಾರೆ
ಅಕ್ಕ ದ್ರೌಪತಿ ಮಗನೇನ ನಾರಿ – ಹಾಕ.

ಅಕ್ಕಾನೆ ದ್ರೌಪತಿಯಂ ಮಂಗನೇನಾ ತಮ್ಮಣ್ಣ
ಲೆಕ್ಕ ತಪ್ಪಿದರೆ ಉಣವಲ್ಲ ನಾರಿ – ಹಾಕ...

ಸಂಜಿಮಾಡಿ ನಾನು ಗಂಗೀಲಿ ನೀರಿಗೆ ಹೋದೆ
ಗಂಗವ್ವತಾಯಿ ಕೊಡನೆತ್ತೆ ನಾರಿ – ಹಾಕ...

ಗಂಗಮ್ಮ ತಾಯಿಯು ಕೊಡನೆತ್ತಿದಾ ನೀರು
ಗಿಂಡಿಲ್ಲಿ ತಮ್ಮಯ್ಯನ ಬೆರಸಿಗೆ ನಾರಿ – ಹಾಕ...

ಕೋರಿ=ಸಣ್ಣವಸ್ತ್ರ. ಓಮು ಸೋಮು = ಓಂ ಮತ್ತು ಸೋಹಂ. ಮಾಲ=ಮಾಲೆ. ಮಲಕೀಲಿ=ತುಂಬಾ ಲಕ್ಷಣವಾಗಿ. ಸಂಜಿ ಮಾಡಿ ನಾನು ಗಂಗೀಗಿ ನೀರಿಗೆ ಹೋದೆ = ಇದು ಗಂಜಿ ಮಾಡಿ ನಾನು ಸಂಜೀಲಿ ನೀರಿಗೆ ಹೋದೆ ಎಂದಿರಬಹುದೆ? ಬೆರಸಿಗೆ=(?).

## ಸೋಬಾನ ಬನ್ನಿರೇ

ಹಾಡಿರುವವರು : ಅಂಕನಹಳ್ಳಿ ಮರಿಅರಸಮ್ಮ,
ಲಕ್ಷ್ಮಮ್ಮ, ಕೆಂಪಮ್ಮ ಮತ್ತು
ದೇವೀರಮ್ಮ

ಸೋಬಾನ ಬನ್ನಿರೇ ॥ಪ॥

ಎತ್ತಿನ ಸಗಳಿ ಹೆತ್ತಮ್ಮ ತಕ್ಕಂಡು ಸೋ....
ಪಟ್ಟೆ ಸಾಲಲ್ಲಿ ನೆಲಗರದು
ಪಟ್ಟೆ ಸಾಲಲ್ಲಿ ನೆಲಗರದು ತಾಯಮ್ಮ ಸೋ....
ನಿಸ್ತ್ರಮ್ಮನ್ಹಸಿಯ ರಚಿಸ್ಯಾಳೆ

ಹೋರಿಯ ಸಗಳಿ ತಾಯಮ್ಮ ತಕ್ಕಂಡು ಸೋ....
ಬಾಲಣ್ಣನ್ಹಸಿಯ ರಚಿಸ್ಯಾಳೆ

ಹಸಿಯ ಬರಿಯೋರ ಮಲ್ಲಿ ಕಸವಿಲ್ಲ ಕಡ್ಡಿಲ್ಲ ಸೋ....
ಹಣ್ಣಡಕೆ ಸಿಪ್ಪೆ ಮೊದಲಿಲ್ಲ
ಹಣ್ಣಡಕೆ ಸಿಪ್ಪೆ ಮೊದಲಿಲ್ಲದ ಮಲ್ಲಿ ಸೋ ...
ಹಸನಾಗಿ ಹಸಿಯ ಬರಿರಮ್ಮ

ಬತ್ತಾದಹಸಿಯಂ ಎತ್ತಾಗೆ ಬರಿಯಂಲೊ ಶಿವನೆ ಸೋ...
ಕತ್ತಾಲೆಗವುದೊ ನಡವಂಲ್ಲಿ
ಕತ್ತಾಲೆಗವುದೊ ನಡವಂಲ್ಲಿ ಸೂಲ್ದಿಗುದೇವ ಸೋ...
ಯತ್ತಾಗಿ ವಂಡಿದನೇ ಜಗಕೆಲ್ಲ

ನೆಲ್ಲಕ್ಕಿಹಸಿಯ ಹ್ಯಾಗೆ ಬರಿಯಂಲೊ ಶಿವನೆ ಸೋ...
ಸಕ್ಕರೇಲ್ಲಬ್ಬ ಕೊರದಂಗೆ
ಸಕ್ಕರೇಲ್ಲಬ್ಬ ಕೊರದಂಗೆ ನಮ್ಮ ಮನೇಲಿ ಸೋ...
ಮಲ್ಲೀಗೂವನ್ಯಾರೆ ಬರದೋರು

ಒಂದು ಬರಿಯೆಂದಾರೆ ಒಂಬತ್ತು ಬರದಾರೆ ಸೋ...
ಒಂಬತ್ತರ ನಡುವೆ ಕೊಣನೂಡಿ
ಒಂಬತ್ತರ ನಡುವೆ ಕೊಣನೂಡಿ ಪಾಂಡ್ಯವರ ಸೋ...
ಮಲ್ಲಿಗೂವನ್ಯಾರೆ ಬರದೋರು

ಎರಡು ಬರಿಯೆಂದರೆ ಎಂಬತ್ತಾ ಬರದಾರೆ ಸೋ...
ಎಂಬತ್ತರ ನಡುವೆ ಕೊಣನೂಡಿ
ಎಂಬತ್ತರ ನಡುವೆ ಕೊಣನೂಡಿ ಪಾಂಡ್ಯವರ ಸೋ..
ಆನೆಯ ಸಾಲ ಬರದವರೆ

ಮೂರ ಬರೆಯೆಂದರೆ ಮೂವತ್ತು ಬರದಾರೆ ಸೋ.
ಮೂವತ್ತರ ನಡುವೆ ಕೊಣನೂಡಿ
ಮೂವತ್ತರ ನಡುವೆ ಕೊಣನೂಡಿ ಪಾಂಡ್ಯವರ ಸೋ.
ಒಂಟೆಯ ಸಾಲ ಒರದಾರೆ

ಹಾಲಕ್ಕಿ ನೀರಕ್ಕಿ ನೀಲವರ್ಣದಕ್ಕಿ ಸೋ...
ಬೆಂಗಳೂರು ಪಟ್ಟಣದ ಬಯಲಕ್ಕಿ
ಬೆಂಗಳೂರು ಪಟ್ಟಣದ ಬಯಲಕ್ಕಿ ಗೊನಿಬತ್ತ ಸೋ...
ಸೇರ್‍ಯಾವೆ ನಮ್ಮ ಹಸೆಗೀಗ

ಹಂಡಕ್ಕಿ ದುಂಡಕ್ಕಿ ದುಂಡರಾಜಣದಕ್ಕಿ ಸೋ...
ಮಾಗಡಿ ಪಟ್ಟಣದ ಬಯಲಕ್ಕಿ
ಮಾಗಡಿ ಪಟ್ಟಣದ ಬಯಲಕ್ಕಿ ಗೊನಿಬತ್ತ ಸೋ...
ಬಂದಾವೆ ನಮ್ಮ ಹಸೆಗೀಗ

ಮುತ್ತಿನ್ಹಸೆಬರೆದು ಶಟ್ಟಿಗೊಳು ನಿಂತವರೆ ಸೋ...
ಶಟ್ಟಿ ನಿನ್ನ ಮಗಳ ಕರಸಯ್ಯ
ಶಟ್ಟಿ ನಿನ್ನ ಮಗಳ ಕರಸಯ್ಯ ಚಿನ್ನಾದ ಸೋ...
ಗಟ್ಟಿ ಬಂದಾವೆ ಮಣೆಯ ಮ್ಯಾಲೆ

ರಾಜುಣದ್ಹಸೆ ಬರೆದು ರಾಯುಗೊಳು ನಿಂತಾರೆ ಸೋ...
ರಾಯು ನಿನ್ನ ಮಗಳ ಕರಸಯ್ಯ
ರಾಯು ನಿನ್ನ ಮಗಳ ಕರಸಯ್ಯ ಚಿನ್ನಾದ ಸೋ...
ಏರು ಬಂದಾವೆ ಮಣೆಯ ಮ್ಯಾಲೆ

ಬಾಳೆಯ ಮರದ ತಾಳು ಬಾಗೀದಂಗೆ ಸೋ...
ಬಾಗೂರು ಪಟ್ಟಣದ ಮಳಿಗಿಂದ
ಬಾಗೂರು ಪಟ್ಟಣದ ಮಳಿಗೆ ಚಿತ್ತಾರವ ಸೋ...
ಕಂಡು ಬಂದೋರು ಹಸಿಯ ಬರಿರಯ್ಯ

ನಿಂಬೇಯು ಮರದ ಕೊಂಬೆ ಬಾಗೀದಂಗೆ ಸೋ....
ಬೆಂಗಳೂರು ಪಟ್ಟಣದ ಮಳಿಗಿಂದ
ಬೆಂಗಳೂರು ಪಟ್ಟಣದ ಮಳಿಗೆ ಚಿತ್ತಾರವ ಸೋ....
ನೋಡಿ ಬಂದೋರು ಹಸಿಯು ಚರಿರಯ್ಯಾ

ನೆಲಗರದು=ನೆಲ ಸಾರಿಸಿ. ನಿಸ್ತ್ರಮ್ಮನ್ನ ಸಿಯ=ಹೆಣ್ಣಿನ ಹಸೆಯನ್ನು. ಸೂಲ್ದಿಗುದೇವ=ಸೂರ್ಯದೇವ. ಕೊಣನೂಡಿ=ಕೊಡ ಬರೆದು (?). ಹಾಲಕ್ಕಿ=ಹಾಲಿನಂತೆ ಬೆಳ್ಳಗಿರುವ ಅಕ್ಕಿ. ನೀಲಕ್ಕಿ=ನೀಲಿ ಬಣ್ಣದ ಅಕ್ಕಿ. ಹಂಡಕ್ಕಿ = ಹಂಡಬಂಡದ ಅಕ್ಕಿ; ಬಿಳುಪು ಮತ್ತು ಕೆಂಪು ಮಿಶ್ರಿತ ಅಕ್ಕಿ; ಚೆನ್ನಾಗಿ ತೊಳಿಸದ ಅಕ್ಕಿ. ಗಟ್ಟಿ=ಹೆಣ್ಣಿನ ಹಸೆ ಬರೆಯುವಾಗ ಒಂದು ಮಣೆಯ ಮೇಲೆ ಗುಂಡಕಲ್ಲು ಇಡುತ್ತಾರೆ. ಗಂಡಿನ ಪ್ರತಿನಿಧಿಯಾಗಿ ಇದೇ ಗಟ್ಟಿ ಇರಬಹುದೇ (?). ಚಿನ್ನದ ಏರು ಬಂದಾವೆ ಮಣೆಯ ಮ್ಯಾಲೆ=ಚಿನ್ನದಂಥ ಹೆಣ್ಣೇ ನೀನು ಬಂದು ಮಣೆಯ ಮೇಲೆ ಏರು ಎಂದು ಅರ್ಥವೆ ?

# ಸೋಬಾನೆಂಬೋದು ಶಿವನೀಗೆ

ಹಾಡಿರುವವರು ; ಚೋಳಸಂದ್ರದ ಚಿಕ್ಕಮ್ಮ ಮತ್ತು ಮೂರು ಜನ ಸಂಗಾತಿಯರು.

ಧ್ವನಿಮುದ್ರಿಕೆಯಲ್ಲಿರುವುದಕ್ಕೆ ಮುನ್ನ :

ಸೋಬಾನೆಂಬೋದು ಶಿವನೀಗೆ ॥ಪ॥

ಎದ್ದು ಬರಿಹೇಳಿ ನಿದ್ರೆಗಣ್ಣನೊರಾ
ಮದ್ದಾಲೆ ದನಿಗೆ ತಿರಗೋರ
ಮದ್ದಾಲೆ ದನಿಗೆ ತಿರಗೋರ್ಹೆಣ್ಣುಮಕ್ಕಳ
ಎದ್ದು ಸೋಬಾನಕೆ ಬರಿಹೇಳಿ ಸೋ....

ಸಾಗಿ ಬರಿಹೇಳಿ ಸ್ವಾಗೆಗಣ್ಣನೊರ
ಕೋಗಿಲದನಿಗೆ ತಿರಗೋರ
ಕೋಗಿಲದನಿಗೆ ತಿರಗೋರ್ಹೆಣ್ಣುಮಕ್ಕಳ
ಸಾಗಿ ಬರಿಹೇಳಿ ಸೋಬಾನಕೆ ಸೋ....

ಕಂಕ್ಯಾದ ದಾರೆ ಕೈಗೂಡಿ ಬಂದಾವೆ
ತೆಂಕಾಲ ಗವಳಿ ನುಡದಾವೆ
ತೆಂಕಾಲ ಗವಳಿ ಏನಂದು ನುಡದಾವೆ
ಕಂಕ್ಯಾದ ಕೈಗೆ ಜಯ ಜಯ ಸೋ....

ಗೋಡಿಮರದೆಲಿಯ ನೋಡಿ ಬಂದೇನಂದ
ಬಾಲಣ್ಣ ಉಣ್ಣೊ ಎಲಿನಿಲ್ಲ
ಬಾಲಣ್ಣ ಉಣ್ಣೊ ಎಲಿನಿಲ್ಲ ಒಳಗಿರುವ್ರೊ
ಗೋಡಿಮರದೆಲಿಯ ಮಂಕ ತೋರೊ ಸೋ...

ಅಂದಾದರಗಿಣಿಯ ಕಂಡು ಬಂದೇನಂದ
ಕಂದಣ್ಣ ಉಣ್ಣೊ ಎಲಿ ಇಲ್ಲ
ಕಂದಣ್ಣ ಉಣ್ಣೊ ಎಲಿ ಇಲ್ಲ ಒಳಗಿರುವ್ರೊ
ಚಂದಾದರಗಿಣಿಯ ಮಂಕ ತೋರೊ ಸೋ...

ಚಪ್ಪರದ್ದಟ್ಟೀಲಿ ಹೊಕ್ಕಿರುವುದೇಟ್ಹೊತ್ತೆ
ಕಪ್ಪುರದ ಭೋಗಿ ಬೆವತಾನೆ
ಕಪ್ಪುರದ ಭೋಗಿ ಬೆವತಾನೆ ಕ್ಯಾಣೇಲಿರುವ
ಕನ್ನೆ ಕರತನ್ನಿ ಕೈಗೆ ದಾರೆ ಸೋ...

ಅಂದುಳದ್ದಟ್ಟಿಲ್ಲಿ ನಿಂದು ಏಟೊತ್ತಾಯ್ತೆ
ಗಂಧಾದ ಭೋಗಿ ಬೆವತಾನಂ
ಗಂಧಾದ ಭೋಗಿ ಬೆವತಾನಂ ಒಳಗಿರುವ
ನಾರಿ ಕರತನ್ನಿ ಕೈಗೆ ಧಾರೆ ಸೋ...

ಒತ್ತಾದ ಹುಲ್ಲಿನಂಗೆ ಒತ್ತಾಗಿ ನಡೆವ್ರೋಳು
ಒಪ್ಪಾದಿಂದಾಕೆ ಬಳಗಾವು
ಒಪ್ಪಾದಿಂದಾಕೆ ಬಳಗಾವು ನಿಮ್ಮ ಪುರುಷ
ಒಪ್ಪಾದಿಂದ ಮಾಲೆ ಧರಿಸ್ಯಾನೆ ಸೋ...

ಸ್ವಾಗೆ ಹುಲ್ಲಿನಂಗೆ ತೇಲುತ್ತಾ ಬರವ್ರೋಳು
ಬಾಳದಿಂದಾಕೆ ಬಳಗಾವು
ಬಾಳದಿಂದಾಕೆ ಬಳಗಾವು ನಿಮ್ಮ ಪುರುಷ
ಬ್ಯಾಗದಿಂದ ಮಾಲೆ ಧರಿಸ್ಯಾನೆ ಸೋ...

ಅತ್ತೊಂದು ಮಣಿ ಹಾಕೆ ಇತ್ತೊಂದು ಮಣಿ ಹಾಕೆ
ಪಟ್ಟೇದ ಹನ್ನೆರಡು ತೆರೆ ಹಿಡಿದು
ಪಟ್ಟೇದ ಹನ್ನೆರಡು ತೆರೆ ಹಿಡಿದು ಮದಿವಣ್ಣ
ಬೆಟ್ಟುಗುರು ಕಂಡ ಮುಕವ ಕಾಣ ಸೋ...

ಹಾಗೊಂದ ಮಣಿ ಹಾಕೆ ಹೀಗೊಂದ ಮಣಿ ಹಾಕೆ
ಸಾಲೀರ ಹನ್ನೆರಡು ತೆರೆ ಹಿಡಿದು
ಸಾಲೀರ ಹನ್ನೆರಡು ತೆರೆ ಹಿಡಿದು ಮದಿವಣ್ಣ
ಬೆಳ್ಳುಗುರು ಕಂಡ ಮುಕವ ಕಾಣ ಸೋ...

ಎಳ್ಳು ಜೀರಿಗೆ ಹೆಣ್ಣಮ್ಮ ಕೈಯು ತುಂಬ
ಎಲ್ಲಾ ಭಾಗ್ಯಾವು ನಮದೆಂದು
ಎಲ್ಲಾ ಭಾಗ್ಯಾವು ನಮದೆಂದು ತಾಯಮ್ಮ
ಚೆಲ್ಲೇ ನಿಮ್ಮ ರಾಯರ ಮುಂಡಿಯ ಮೇಲೆ ಸೋ...

ಅಕ್ಕಿ ಜೀರೀಗೆ ಚಿಕ್ಕಮ್ಮ ಕೈಯು ತುಂಬ
ಅಷ್ಟ ಭಾಗ್ಯಾವು ನಮದೆಂದು
ಅಷ್ಟ ಭಾಗ್ಯಾವು ನಮದೆಂದು ತಾಯಮ್ಮ
ಬಿತ್ತೇ ನಿಮ್ಮ ರಾಯ್ರು ಮುಡಿಯ ಮೇಲೆ ಸೋ...

ಇಲ್ಲಿಂದ ಮುಂದೆ ಧ್ವನಿಮುದ್ರಿಕೆಯಲ್ಲಿರುವಂತೆ :

ಅಂಗೈಯ ಮಾಲೆ ಮುಂಗೈಗೆ ತಕ್ಕೊಂಡು
ಬಂದೀಯ ತೋಳ ತಿರವೂತ
ಬಂದೀಯ ತೋಳ ತಿರವೂತ ಕಂದವ್ಮ
ಪುರುಷಾಗೆ ಮಾಲೆ ಧರಿಸ್ಯಾಳೆ ಸೋ....

ಆ ಕೈಯ ಮಾಲೆ ಈ ಕೈಗೆ ತಕ್ಕೊಂಡು
ಬಾಪೂರಿ ತೋಳ ತಿರವೂತ
ಬಾಪೂರಿ ತೋಳ ತಿರವೂತ ಮಂದಿವಣ್ಣ
ಅವನಾಕೀಗೆ ಮಾಲೆ ಧರಿಸ್ಯಾನೆ ಸೋ....

ಪಟ್ಟೆ ಜೋತಾರ ಮೆಟ್ಟೂತ ತುಣವೂತ
ಮುತ್ತೀನ ಗಿಂಡಿ ನಡವಿರಿಸಿ
ಮುತ್ತೀನ ಗಿಂಡಿ ನಡವಿರಿಸಿ ಬೆಳ್ಳೂರ
ಪುಟ್ಟ ಜೋಯಿಸರ ಕರಿಸ್ಯಾರೆ
ಪುಟ್ಟ ಜೋಯಿಸರ ಕರಿಸ್ಯಾರೆ ನವ್ಮನಿಯ
ಪುತ್ರಣ್ಣಗು ಧಾರೆ ಎರದಾರೆ ಸೋ....

ತುಂಪ್ಪಾದ ಕೊಳಕೆ ಕಟ್ಟಿರುವೆ ಗವುದಂಗೆ
ಅಕ್ಕ ಗೌರವ್ಮನ ಬಳಗಾವು
ಅಕ್ಕ ಗೌರವ್ಮನ ಬಳಗ ಎಲ್ಲಾ ಬಂದು
ತುಂಪ್ಪಾದ ಧಾರೆ ಎರದಾರೆ ಸೋ.

ಹಾಲೀನ ಕೊಳಕೆ ಸಾಲಿರುವೆ ಗವುದಂಗೆ
ತಾಯಿ ಗೌರಮ್ಮನ ಬಳಗಾವು
ತಾಯಿ ಗೌರಮ್ಮನ ಬಳಗ ಎಲ್ಲಾ ಬಂದು
ಹಾಲೀನ ಧಾರೆ ಎರದಾರೆ ಸೋ....

ಕಳಿಯಡಕೆ ಬಂದೊ ಕುಡುಂಕೇಲಿ ಸುಣ್ಣ ಬಂದೊ
ಪಕ್ಷೀಯಾ ಮ್ಯಾಲೆ ಎಲೆ ಬಂದೊ
ಪಕ್ಷೀಯು ಮ್ಯಾಲೆ ಎಲೆ ಬಂದೊ ನಮ್ಮಸಿಯು
ಶೆಟ್ಟ್ಯೋರ ಮಗನ ಮದವೀಗೆ ಸೋ.

ಸ್ವಾಗೆಗಣ್ಣ್ನೋರ = ಸ್ವಾಗೆಗಣ್ಣನವರ ; ನವಿಲು ಗರಿಯಂತಹ ಕಣ್ಣಿನವರ. ಕಂಕ್ಣಾದ=ಕಂಕಣದ. ತೆಂಕಾಲಗವಳಿ= ದಕ್ಷಿಣದಲ್ಲಿ ಗೌಳಿ ನುಡಿದರೆ ಶ್ರೇಷ್ಠ. ಗೋಡಿಮಾರ=ಗೋಣಿಮಾರ ಮುಕತೋರೊ=ಮುಖತೋರು. ಏಟ್ಹೊತ್ತೆ=ಏಷ್ಟು ಹೊತ್ತು. ಕಪ್ಪೂರದ=ಕರ್ಪೂರದ. ಭೋಗಿ=ಸುಖ ಪುರುಷ. ಕಪ್ಪೂರದ ಭೋಗಿ=ಕರ್ಪೂರದಂತಹ ಗಂಡು. ಚೆಳ್ಳುಗುರು=ತುದಿಯು ಉಗುರು. ಬಾಪೂರಿ = ಬಾಹು ಪುರಿ ; ಗಂಡಸರ ತೋಳಿನ ಅಲಂಕಾರದ ಒಡವೆ.

## ಇಲ್ಲಿ ಕೇಳಾರಿ ನಮ್ಮ ಹಾಡ

ಹಾಡಿರುವವರು : ತಿಕ್ಕೋಟಾದ ಗೌರವ್ವ ಮಾದರ
ಮತ್ತು ಸಂಗಾತಿಯರು

ಸೋ‌ೀ ॥ಸೊಲ್ಲು॥

ಅಲ್ಲೇನ ಕೇಳಿರಿ ಜೊಲ್ಲ ಬಾಯಂವರ್‍ಹಾಡ
ಇಲ್ಲೀ ಕೇಳಾರಿ ನಮ್ಮ ಹಾಡ ಸೋ‌ೀ
ಇಲ್ಲೀ ಕೇಳಾರಿ ನಮ್ಮ ಹಾಡ ನಮ್ಮ ತಿಕ್ಕೋಟಿ
ಕಲ್ಲೀಗಕ್ಕಸರ ಬರದಂಗೆ ಸೋ‌ೀ

ಅತ್ತೇನ ಕೇಳೀರಿ ಪಟ್ಟಾಬಾಯಂವರ್‍ಹಾಡ
ಇತ್ತಾ ಕೇಳಾರಿ ನಮ್ಮ ಹಾಡ ಸೋ‌ೀ
ಇತ್ತಾ ಕೇಳಾರಿ ನಮ್ಮ ಹಾಡ ನಮ್ಮ ತಿಕ್ಕೋಟಿ
ಕಟ್ಟೀಗಕ್ಕಸರ ಬರದಂಗೆ ಸೋ‌ೀ

ಆನಿ ಬರತಾವೆಂದು ಆರು ಬಣವೀನ ಕೊಣ್ಣೆ
ಆನೆಲ್ಲೆ ನಿನ್ನ ಬಳಗೆಲ್ಲೆ
ಆನೆಲ್ಲೆ ನಿನ್ನ ಬಳಗೆಲ್ಲೆ ನಮ್ಮ ಬೀಗ
ಗ್ಯಾರೆತ್ತಿನಲ್ಲಿ ಬಂದೆ ಇಳದಾನೆ

ಒಂಟಿ ಬರತಾವೆಂದು ಎಂಟು ಬಣವೀನ ಕೊಣ್ಣೆ  
ಒಂಟೆಲ್ಲೆ ನಿನ್ನ ಬಳಗೆಲ್ಲೆ ಸೋ  
ಒಂಟೆಲ್ಲೆ ನಿನ್ನ ಬಳಗೆಲ್ಲೆ ನನ್ನ ಬೀಗ  
ಕುಂಟೆತ್ತ್ರಿಲಿ ಬಂದೆ ಇಳದಾನೆ ಸೋ

ಬಂದಿರಿ ನಮ್ಮ ಬೀಗರೆ ಬಳದಿರಿ ನಮ್ಮ ಬೀಗರ್‍ಯಾ  
ಬಂದಿರಿ ಬ್ಯಾಸಿಕಿ ಬಿಸಲೀಗೆ ಸೋ  
ಬಂದಿರಿ ಬ್ಯಾಸಿಕಿ ಬಿಸಲೀಗೆ ನಿಮ್ಮ ಕಾಲೀಗೆ  
ತಂದೀವಿ ತಂಗೀನ ತಿಳಿಯು ನೀರ ಸೋ

ಜೊಲ್ಲಬಾಯುವರ್‍ಹಾಡ = ಜೊಲ್ಲುಬಾಯಿಯುವರ ಹಾಡ. ಕಲ್ಲೀಗಕ್ಕಸರ ಬರದಂಗೆ=ಕಲ್ಲಿನ ಮೇಲೆ ಅಕ್ಷರ ಬರೆದಂತೆ ; ಕಲ್ಲಿನಲ್ಲಿ ಶಾಸನ ಬರೆದಂತೆ. ಪಟ್ಟಾಬಾಯಿಯವರ=ಅಗಲನೇ ಬಾಯಿಯುವರ. ಬಣವೀನ=ಬಣವಿಯನ್ನು ; ಹುಲ್ಲಿನ ಮೆದೆಯನ್ನು. ಕೊಣ್ಣೆ = ಕೋಡೆ. ಗ್ಯಾರೆತ್ತು = ಕೌಲೆತ್ತು ; ಕೋಲೆಬಸವ. ಬಳದಿರಿ=ಬಳಲಿದಿರಿ. ಬ್ಯಾಸಿಕಿ=ಬೇಸಿಗೆ. ತಂಗೀನ=ತೆಂಗಿನ ಎಳೆಕಾಯಿ.

# ಹನ್ನೆರಡ ದೇವರಿಗಿ ಹರಕಿಹೊತ್ತ್ಯಡದೀನೆ

ಹಾಡಿರುವವರು : ತಿಕ್ಕೋಟಾದ ಗೌರವ್ವ ಮಾದರ
ಮತ್ತು ಸಂಗಾತಿಯರು.

ಸೋಬಾನವೇ ॥ಪ॥

ಹನ್ನೆರಡ ದೇವರಗೀ ಹರಕೀಹೊತ್ತ್ಯಡದೀನೆ
ಚಿನ್ನಾದ ಗೊಂಬಿಯಂಥ ಮಗಳ ಸೋ.

ಮತ್ತೀನಂತಾ ಮಗಳು ಅತ್ತೂಕರಿಯಯವಳವ್ವಾ
ಅತ್ಯವ್ವ ಕೈಗಿ ಕುಡಲ್ಯಾಂಗೆ ಸೋ....

ದಗದ ಮಾಡೆಂದಾರೆ ನೀಮಾಡಂತಾ ಮಗಳು
ತೂಗುಮಂಚಾದ ಮ್ಯಾಲೆ ಮನಗವಳ ಸೋ....

ಅಷ್ಟೂ ದೈವದ ಮುಂದೆ ಕೊಟ್ಟೇವೆ ನಾವೀಗ
ಹುಟ್ಟೀದ ಮನಿಗಿ ಎರವಾದ್ಯಾ ಸೋ....

ಹಣ್ಣುಹಾಲಾನೆ ಉಂಡು ಬೆಣ್ಣಿರೊಟ್ಟಿಯ ತಿಂದು
ನನ್ನ ಮನಿಗಿಂದು ಎರವಾದ್ಯಾ ಸೋ....

ಸಕ್ಕ್ಯಾರಿ ಶ್ಯಾವೀಗೀ ಸಿಕ್ಕಂಗೆ ಉಣಸೀನ
ಅಕ್ಕರದಿಂದ ಸಲವೀನ ಸೋ..

ಅತ್ತೀನ ಕರೀರವ್ವಾ ಅತ್ತೀಗಿನ ಕರೀರವ್ವಾ
ನಾದೀನಹರಿಯಾಕೆ ಕರೀರವ್ವ ಸೋ

ನಾದೀನಿಹರಿಯಾಕೆ ಕರೀರವ್ವ ಮದವೀಗೆ
ಮಯುದ್ದಾ ಮಗಳನ್ನ ಕಡರವ್ವ ಸೋ..

ಉತ್ತುಮಾ ರೀತಿಂದ ಪುತ್ರೀಯಾ ಸಲುವಂತೆ
ಅತ್ತ್ಯವ್ನ ಕೈಗಿ ಕುಡರವ್ವ ಸೋ...

ಬಾಳೀಯಾ ಹಣ್ಣನ್ನೂ ಗಿಣಿರಾಮ ಒಯ್ದಂಗೆ
ತಿಳಿದೂ ನಮ್ಮಗಳನ ಕುಡೂತೀನ ಸೋ...

ಕಂಚೀನ ಹಣ್ಣನ್ನು ಲಂಚಾಕ್ಕ ಕೊಟ್ಟಂಗೆ
ಕಂಚಾನಿದಿರೀಗಿ ಕುಡತೀವ ಸೋ.

ಉತ್ತುಮು ರೀತಿಂದ ಪುತ್ರೀಯಾ ಸಲುವಂತೆ
ಅತ್ತ್ಯವ್ನ ಕೈಗಿ ಕುಡರವ್ವ ಸೋ..

ನನ್ನ ಮಗಳಲ್ಲವ್ವ ನಿನ್ನ ಮಗಳತ್ತೆವ್ವ
ಪ್ರೇಮಾದ ಪುತ್ರಿ ಸಲವವ್ವಾ ಸೋ.

ನನ್ನ ಮಂಗಳೆಂದು ತಿಳದು ನೀ ನಡದರೆ
ನನ್ನ ಮನೀವಳಸ್ವಾಮಿ ದಯ ನಿನಗೆ ಸೋ....

ಹರಕಿಹೊತ್ತ್ಯಡದೀನ=ಹರಕೆ ಮಾಡಿಕೊಂಡು ಹಡೆದಿದ್ದೀನಿ. ಕುಡಲ್ಯಂಗೆ=ಕೊಡುವುದು ಹೇಗೆ. ದಗದಾ=ಕೆಲಸ. ಎರವಾದ್ಯಾ=ಬೇರೆಯವಳಾದೆಯಾ. ಕುಡರವ್ವಾ=ಕೊಡಿರೇ ಅವ್ವಾ. ಕಂಚೀನಹಣ್ಣನ್ನ = ಹುಳಿಯಾದ ಒಂದು ಬಗೆಯ ಹಣ್ಣು. ಲಂಚಾಕ ಕೊಟ್ಟ್ಯಂಗೆ=(?). ಕಂಚಾನಿದಿರೀಗಿ= (?). ಮನಿವಳಸ್ವಾಮಿ = ಮನೆದೇವರು.

# ಹೆಣ್ಣು ಮಕ್ಕಳ ಕಳವಿ ಹ್ಯಂಗಿದ್ದಿ ತಾಯಮ್ಮ

ಹಾಡಿರುವವರು : ಕಂಬೀಪುರದ ನಂಜಮ್ಮ ಮತ್ತು ಸಂಗಾತಿಯರು.

ಹೆಣ್ಣು ಮಕ್ಕಳ ಕಳವಿ ಹ್ಯಂಗಿದ್ದಿ ತಾಯಮ್ಮ
ಹನ್ನೆರ್ಡಂ ಳದ ಗರಡೀಲಿ ಗರಡೀಲಿ
ಹನ್ನೆರ್ಡಂಕಳದ ಗರಡೀ ನಡುಮನೇಲಿ
ನಡುಮನೇಲಿ ನವಲು ಬರಕೊಳೆ ಬರಕೊಳೆ
ನಡುಮನೇಲಿ ನವಲು ಬರಕೊಳೆ ತಾಯಮ್ಮ
ಅದ ನೋಡಿ ನನ್ನ ನೆನಕೊಳೆ ನೆನಕೊಳೆ

ಜಾಣೆ ತಂಗ್ಯಮ್ಮನ ನಾನೆಂಗೆ ಮರಿಯಾಲಿ
ಮರುಗು ಬಿತ್ತಣ್ಣ ಮನಿ ಮುಂದೆ ಮನಿ ಮುಂದೆ
ಮರುಗು ಬಿತ್ತಣ್ಣ ಮನಿ ಮುಂದೆ ಸಾವಂತಿಗೆ
ಅದ ನೋಡಿ ನನ್ನ ನೆನಕೊಳೊ ನೆನಕೊಳೊ

ಜಾಣೆ ತಂಗ್ಯಮ್ಮನ ನಾನೆಂಗೆ ಮರಿಯಾಲಿ
ಜಾವಾಕೆ ನೂರೆಲಿಯು ಮೆಲುವೋಳು ಮೆಲುವೋಳು
ಜಾವಾಕೆ ನೂರೆಲಿಯು ಮೆಲುವೋ ತಂಗ್ಯಮ್ಮನ
ಜಾಣೆ ನಾನೆಂಗೆ ಮರಿಯಾಲಿ ಮರಿಯಾಲಿ

ಹೆಣ್ಣು ಮಕ್ಕಳ ಕಳವಿ ಹಿಂದಿರುಗಿ ಬರುವಾಗ
ಸಂಜೀಗೆ ಮರದಡಿ ನಿಂತುಕೊಂಡು ತಾಯಮ್ಮ
ಚಿಂತೆಮಾಡ್ಯಾಳು ಶಿವನೀಗೆ ಶಿವನೀಗೆ

ಚಿಂತೆಮಾಡಲು ಬ್ಯಾಡ ಶಿವನಾಣೆ ಬಯ್‌ಬ್ಯಾಡ
ಯಾಕ್ಹೆತ್ತೆ ನನ್ನ ಹಡುದಮ್ಮ ಹಡುದಮ್ಮ
ಯಾಕ್ಹೆತ್ತೆ ನನ್ನ ಹಡುದಮ್ಮ ಹುಟ್ಟಿರುವ್ರೊ
ಕೊಟ್ಟು ನೀನ್ಯಾಕೆ ಅಳುತೀಯು ಅಳುತೀಯು
ಕೊಟ್ಟು ನೀನಾಕೆ ಅಳುತೀಯು ತಾಯಮ್ಮ
ಹುಟ್ಟೀದ ಮನಿಗೆ ಎರವಾದೆ ಎರವಾದೆ
ಹುಟ್ಟೀದ ಮನಿಗೆ ಎರವಾದೆ ತಾಯಮ್ಮ
ಕಳುವಿ ನೀನ್ಯಾಕೆ ಅಳುತೀಯು ಅಳುತೀಯು

ಗರಡಿ=ವಾಸದ ಮನೆ (?) ; ಸಾಧನೆ ಮಾಡುವ ಸ್ಥಳ. (ಆದರೆ ಇಲ್ಲಿ ಆ ಅರ್ಥ ಸರಿಯಿಲ್ಲ) ಮರುಗು=ಮರುಗ ; ಸುವಾಸನೆಯು ಒಂದು ಬಗೆಯ ಸಸ್ಯ. ಜಾವಾಕೆ=ಜಾವು ; ಯಾಮ ; ಕಾಲದ ಒಂದು ಲೆಕ್ಕ. ನೂರೆಲಿಯು=ನೂರು ವೀಳೆಯ ದೆಲೆ. ಯಾಕ್ಹೆತ್ತೆ=ಯಾಕೆ ಹೆತ್ತೆ. ಎರವಾದೆ=ಬೇರೆಯಾದೆ ; ತಪ್ಪಲಿಯಾದೆ.

# ಕಲ್ಲಮ್ಮ ಕೈಯ್ಯಬಿಡೆ

ಹಾಡಿರುವವರು : ಕರಿಜೀರಳ್ಳಿ ಸಾಕಮ್ಮ ಮತ್ತು
ಸಂಗಾತಿಯರು

ಕಲ್ಲಮ್ಮ ಕಯ್ಯ ಬಿಡೆ ಸಾಶಣದ
ಸಣ್ಣರಾಗಿ ಬೀಸೋಕಲ್ಲೆ ॥ಪ॥

ರಾಗಿ ಮುಗುದೋ ರಾಜಾಣ ಹೆಚ್ಚಿದೋ
ಶ್ರೀರಾಮರ ಮನೆ ಗಿಣಿ ಬಂದು ಕಲ್ಲಮ್ಮ...
ಶ್ರೀರಾಮರ ಮನೆ ಗಿಣಿ ಬಂದೇನಂದಾವೆ
ಕಲ್ಲ ಬಿಟ್ಟು ಕಯ್ಯ ಮುಗಿಯುಮ್ಮ ಕಲ್ಲಮ್ಮ...

ಹಾದಿ ಮನಿಯೋಳೆ ಗೋಲಾದುಂಗುರದೋಳೆ
ಗೋದೂವೆ ಸೀರೆ ನರಿಗ್ಯೋಳೆ ಕಲ್ಲಮ್ಮ..
ಗೋದೂವೆ ಸೀರೆ ನರಿಗ್ಯೋಳೆ ಸರಸ್ವತಿ
ನಾವು ಓದಿ ಬಿಡತೀವಿ ವರಗಮ್ಮ ಕಲ್ಲಮ್ಮ..

ಹುಂಜ ಕೂಗ್ಯಾವೆ ಕೆಂಜಡೆ ಮದಿರ್‍ಯಾವೆ
ಈಶ್ವರ ಸಾಮಿ ರತವೇರಿ ಕಲ್ಲಮ್ಮ..
ಈಶ್ವರ ಸಾಮಿ ರತವೇರಿ ಬರುವಾಗ
ಕಲ್ಲ ಬಿಟ್ಟು ಕಯ್ಯ ಮುಗುದೇವು ಕಲ್ಲಮ್ಮ..

ಹುಂಜ ಕೂಗ್ಯಾವೆ ಕೆಂಜಾಡೆ ವದಿರ್ಯಾವೆ
ನಾರಾಯ್ಣ ಸ್ವಾಮಿ ರತವೇರಿ ಕಲ್ಲಮ್ಮ....
ನಾರಾಯ್ಣಿ ಸ್ವಾಮಿ ರತವೇರಿ ಬರುವಾಗ
ನಾವೆದ್ದು ಕಯ್ಯ ಮುಗಂದೇವು ಕಲ್ಲಮ್ಮ....

ಕಲಾಡಿ ಕಯ್ಯಾಡಿ ಮೇಲೆರಡು ಭುಜವಾಡಿ
ನಾಗರಹಾವಿನಂಗೆ ನಡುವಾಡಿ ಕಲ್ಲಮ್ಮ....
ನಾಗರಹಾವಿನಂತೆ ನಡುವಾಡಿ ಸರಸ್ವತಿ
ನಮ್ಮೊಂದಿಗಾಡಿ ದಣಿದೇನೆ ಕಲ್ಲಮ್ಮ....
ನಮ್ಮೊಂದಿಗಾಡಿ ದಣಿದೇನೆ ಸರಸ್ವತಿ
ನೀನ್ಹೋಗಮ್ಮ ರಾಣಿ ಬಾಳೆ ವನಕಾಗಿ ಕಲ್ಲಮ್ಮ....

ಬಾಳೇವನದಲ್ಲಿ ಬಾಲೇರ ಕಾವಾಲು
ನೀನ್ಹೋಗಮ್ಮ ಇಂಬೀಯು ವನಕಾಗಿ ಕಲ್ಲಮ್ಮ....

ಇಂಬೀವನದಲ್ಲಿ ರಂಬೇರ ಕಾವಾಲು
ನೀನ್ಹೋಗಮ್ಮ ಕಿತ್ತಲಿ ವನಕಾಗಿ ಕಲ್ಲಮ್ಮ...

ಕಿತ್ತಲಿವನದಲ್ಲಿ ಚಂದಿರನ ಕಾವಾಲು
ನೀನ್ಹೋಗಮ್ಮ ಆಚೆ ಹೊಳೆಗಾಗಿ ಕಲ್ಲಮ್ಮ....

ಕಲ್ಲಬಿಡುತಾರೆಂದು ಚಿಟ್ಟುಮಾಡಲಿಬ್ಯಾಡ
ಕುಕ್ಕಲ್ಲಿ ರಾಗಿ ಬಿಳಿಯುಲಿ ಕಲ್ಲಮ್ಮ..

ಕುಂಕೈಲ್ಲಿ ರಾಗಿ ಬಿಳಿಯುಲೆ ತಕ್ಕಂಡು
ಮತ್ತೆ ರಾತರಿಗೆ ಬರತೀನಿ ಕಲ್ಲಮ್ಮ.

ಸಾಶಣದ = ಶಾಸನ ಹಾಕಿಕೊಟ್ಟ ಅಂದರೆ ಸ್ಥಿರವಾದ. ಗೋಲಾದುಂಗುರದವಳೆ=ದುಂಡಾದ ಉಂಗುರದವಳೇ. ವರಗಮ್ಮ=ಮಲಗಿಕೋ. ಹುಂಜ=ಗಂಡುಕೋಳಿ. ಕೆಂಜಾಡೆ ಕೆದರ್ಯಾವೆ=ಕೆಂಪು ಜಡೆ ಚಲ್ಲಿದೋ (ಅರುಣೋದಯ ದ ವರ್ಣನೆ). ಚಿಟ್ಟು = ಸಿಟ್ಟು.

# ಹಾಡುಗಾರರ ಪರಿಚಯ

## ಕೋಟಿ ಜಂಗಮರ ನೆನದೇನು

ಹಾಡಿರುವವರು : ಚುಂಚನಹಳ್ಳಿ ಪಾಳ್ಯದ ಗಿರಿಯಮ್ಮ ಮತ್ತು ಗಂಗಮ್ಮ.

ಒಕ್ಕಲಿಗರ ಜಾತಿಯ ಗಿರಿಯಮ್ಮ ಚುಂಚನಗಿರಿಗೆ ಅತ್ಯಂತ ಸಮೀಪವಾಗಿ ಅದರ ತಪ್ಪಲಿನಲ್ಲೇ ಇರುವ ಚುಂಚನಹಳ್ಳಿ ಪಾಳ್ಯದವಳು. ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನ ಈ ಹಳ್ಳಿಯಲ್ಲಿ ಆಕೆಯ ಮನೆಯಲ್ಲಿಯೇ ಬೆಳಗಿನ ಹೊತ್ತು ಎದ್ದು ರಾಗಿ ಬೀಸುವಾಗ ಈ ಹಾಡನ್ನು ಧ್ವನಿ ಮುದ್ರಿಸಿಕೊಂಡದ್ದು.

ಗಿರಿಯಮ್ಮ-ಗಂಡ ಗಿರೀಗೌಡ-ಈ ದಂಪತಿಗಳಿಗೆ ಗಂಡು ಹೆಣ್ಣು ಮಕ್ಕಳಿವೆ. ಹೊಲ ಗದ್ದೆ ತೋಟ ಮನೆ ಮಠ ಇವೆ. ಆದರೂ ಹಗಲೂ ರಾತ್ರಿ ದುಡಿಮೆ ಒಕ್ಕಲಿಗರಿಗೆ ತಪ್ಪಿದ್ದಲ್ಲ.

ಹಾಡುವುದು ಗಿರಿಯಮ್ಮನಿಗೆ ಒಂದು ಗೀಳು. ಸುಮಾರು 55 ವರ್ಷದ ಗಿರಿಯಮ್ಮನ ತೌರೂರು ಕಾಡು ಸೂರು ಮುದಿಗೆರೆ. ಅವಳ ತಾಯಿ ಬಹಳ ಹಾಡ್ತಿದ್ಲಂತೆ. ಆದರೆ ತಾನು ಈಗ ಹಾಡುತ್ತಿರುವ ಹಾಡುಗಳನ್ನು ತಾಯಿಂದ ಕಲಿಯಲಿಲ್ಲ, ಮದುವೆಯಾದ ಮೇಲೆ ಅತ್ತೆ ಯಿಂದ ಕಲಿತೆ ಎಂದು ಹೇಳುತ್ತಾಳೆ ಗಿರಿಯಮ್ಮ. "ಸ್ಕೂಲಿಗೆ ಓದಾಕೆ ಹಾಕಿದ್ರೂ ನಾನು ಓದು ಕಲೀಲಿಲ್ಲ. ಆದರ ಬದಲು ನನ್ನ ಅತ್ತೆಯಿಂದ ಹಾಡು ಕಲಿತೆ" ಎನ್ನು ತ್ತಾಳೆ.

ಶ್ರೀ ಆದಿಚುಂಚನಗಿರಿ ಭೈರವೇಶ್ವರ ಗೀತಗಾಯನ ಮೇಳವನ್ನು ಕರ್ನಾಟಕ ಜಾನಪದ ಟ್ರಸ್ಟ್ ಶ್ರೀಕ್ಷೇತ್ರದಲ್ಲಿ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳ ಆಶೀರ್ವಾದದಿಂದ 1979ರಲ್ಲಿ ಆರಂಭಿಸಿತು. ಆಗಿನಿಂದ ಈಗಿನವರೆಗೂ ಸಹಸ್ರಾರು ಜನ ಸ್ತ್ರೀಪುರುಷರು ಬಂದು ಮೇಳದಲ್ಲಿ ಭಾಗ ವಹಿಸುತ್ತಿದ್ದಾರೆ. ಬಂದವರಿಗೆಲ್ಲ ಪ್ರಯಾಣವೆಚ್ಚ ಊಟ ವಸತಿ ಮತ್ತು ಸೀರೆ ಕಣ ಪಂಚೆ ಟವಲ್ ನೀಡಿ ಸ್ವಾಮಿ ಗಳು ಆಶೀರ್ವದಿಸುತ್ತಾರೆ. ಗೀತಗಾಯನ ಮೇಳದ ಮೊದಲ ವರ್ಷವೇ ನಾನು ಗಿರಿಯಮ್ಮನ ಹಾಡಿಗೆ ಮರು ಳಾದೆ. ಆಕೆಯದು ಒಂದು ವಿಶಿಷ್ಟ ಕಂಠ. ಆಕೆಯು ಹಾಡುವ ಧಾಟಿಗಳೂ ವಿಶಿಷ್ಟವಾದವುಗಳು. ಹೀಗಾಗಿ ಆಕೆ ಪ್ರತಿ ವರ್ಷವೂ ಹಾಡುಗಾರಿಕೆ ಸ್ಪರ್ಧೆಯಲ್ಲಿ ಬಹು ಮಾನ ಪಡೆಯುತ್ತಿದ್ದಾಳೆ.

೧೯೮೦-೮೧ ರಲ್ಲಿ ನಾನು ಒಂದು ವಾರ ಕಾಲ ಚುಂಚನಗಿರಿ ಕ್ಷೇತ್ರದಲ್ಲಿ ಮೊಕ್ಕಾಂ ಮಾಡಿದ್ದಾಗ ಆಕೆಯು ಮತ್ತು ಇನ್ನೂ ಹತ್ತಾರು ತಂಡಗಳ ಹಾಡುಗಳನ್ನೂ ಮಾತುಕತೆಗಳನ್ನೂ ಒಂದೂ ಬಿಡದಂತೆ ಧ್ವನಿಮುದ್ರಿಸಿ ಕೊಂಡೆ. ತನ್ನ ಹಾಡುಗಾರಿಕೆಯ ೪೦ ವರ್ಷ ಬಾಳಿನಲ್ಲಿ ಕಲಿತಿದ್ದನ್ನೆಲ್ಲಾ ಗಿರಿಯಮ್ಮ ಬಹು ಸಂತೋಷದಿಂದ ಹಾಡಿ ದಳು. ಬಿಸೋಪದ, ಅತ್ತಿಗೆ-ನಾದ್ನೀರು, ಅಣ್ಣ-ತಂಗಿ, ಅಕ್ಕ-ತಂಗಿ, ತಾಯಿ-ತವರು, ಭೈರಪ್ಪ, ನಂಜುಂಡೇಶ್ವರ, ತಿಮ್ಮಪ್ಪ ಮುಂತಾದ ದೇವರುಗಳು, ಮುತ್ತಿನಶೆಟ್ಟಿ, ಬಳೆ ಶೆಟ್ಟಿ, ದೂರಿಪದ, ಸೋಬಾನೆಪದ, ಮಳೆರಾಯ, ಸೀತೆ ಸತ್ವ ಪರೀಕ್ಷೆ, ಧರ್ಮರು, ಮಾಳಮ್ಮ, ಕಂಬದಮ್ಮ, ಬಂಜೆ, ನಾಟಪದ, ಗೀಜಗನ ಪದ ಇತ್ಯಾದಿ ಹಾಡುಗಳನ್ನು ಆಕೆ ಅಪೂರ್ವವಾದ ಧಾಟಿಗಳಲ್ಲಿ ಹಾಡಿದಳು.

ರೇಡಿಯೋದಲ್ಲಿ ಬರುವ ಜನಪದ ಗೀತೆಗಳನ್ನು ತಪ್ಪದೆ ಕೇಳುತ್ತಾಳೆ ಗಿರಿಯಮ್ಮ. "ಸೋಮವಾರ, ಮಂಗಳವಾರ, ಬುಧವಾರ, ಶುಕ್ರವಾರ ಬರುವ ಜನಪದ ಹಾಡುಗಳನ್ನು ನಾನು ತಪ್ಪದೆ ಕೇಳ್ತೀನಿ. ಯಾವ ಕೆಲ್ಸ ಇರ್ಲಿ, ಎಲ್ಲಾರ ಇರ್ಲಿ ಅವನ್ನು ಕೇಳ್ತೀನಿ. ಪಿ. ಕಾಳಿಂಗ ರಾವ್ ಹಾಡು ನನಗೆ ತುಂಬಾ ಇಷ್ಟ. ಅವರು ಸತ್ತರು ಅಂತ ಕೇಳ್ದಾಗ ನನಗೆ ಕಣ್ಣೀರು ಬಂತು. ಅವರು ಅಷ್ಟು ಚೆನ್ನಾಗಿ ಹಾಡೋರು. ಆದೇ ಸಿನಿಮಾ ಹಾಡು ನನಗೆ ಇಷ್ಟ ಇಲ್ಲ. 'ಸಂಗೀತವೇ ನೀನಾಡೋ ಮಾತೆಲ್ಲ ಸಂತೋ

ಪವೇ' ಅನ್ನೋ ಹಾಡು ಕೇಳಿದರೆ ನನಗೆ ಮೈಯುರಿ" ಎನ್ನುತ್ತಾಳೆ ಗಿರಿಯಮ್ಮ.

ಇವಳ ಜೊತೆಗಾತಿ ಗಂಗಮ್ಮ ಹಜಾಮರವಳು. ಬೇರೆ ಬೇರೆ ಜಾತಿಯವರು ತೊಡೆಯ ಮೇಲೆ ತೊಡೆ ಹಾಕಿ ಕುಳಿತು ಕೆನ್ನೆಗೆ ಕೆನ್ನೆ ಕೊಟ್ಟು ಹಾಡುವುದನ್ನು ನಮ್ಮ ಹಳ್ಳಿಗಳಲ್ಲಿ ಮಾತ್ರ ಕಾಣಬಹುದು. ಒಕ್ಕಲಿಗರು ಹೊಲೆಯರು ಮಾದಿಗರು ಎಲ್ಲರೂ ಒಟ್ಟಿಗೆ ಸೇರಿ ಜಾತಿ ಗೀತಿಗಳನ್ನೆಲ್ಲಾ ಮರೆತು ಅಕ್ಕತಂಗಿಯರಂತೆ ಹಾಡುವು ದೆಂದರೆ ನಿಜವಾದ ಸರ್ವೋದಯವಲ್ಲವೆ? ಗಂಗಮ್ಮ, ಗಿರಿಯಮ್ಮನಿಗೆ ದನಿಕೊಡುವುದಷ್ಟೇ ಅಲ್ಲದೆ ತಾನೂ ಕೆಲವು ಹಾಡುಗಳನ್ನು ಸುಶ್ರಾವ್ಯವಾಗಿ ಹಾಡುತ್ತಾಳೆ. ಈಕೆಗೆ ಸಿನೆಮಾ ನೋಡುವ ಗೀಳು. ರಾತ್ರಿ ಹೊತ್ತು ಮಕ್ಕಳು ಕಟ್ಟಿಕೊಂಡು ಐದಾರು ಮೈಲಿ ನಡೆದು ಬೆಳ್ಳೂರಿಗೆ ಹೋಗಿ ಸಿನೆಮಾ ನೋಡಿ ಬರುತ್ತಿದ್ದಳು. ಎಲ್ಲೋ ಏನೋ ಆಯಿತು. ಅವಳು ಈಗ ಊರಿನಲ್ಲಿ ಇಲ್ಲ. ಗಿರಿಯಮ್ಮನಿಗೆ ದನಿ ಕೊಡುವವರೇ ಇಲ್ಲವಾ ಯಿತು. ಆದರೆ ಆಕೆ ಮತ್ತೊಬ್ಬಳನ್ನು ತನ್ನ ಜೊತೆಗೆ ಸೇರಿಸಿಕೊಂಡು ಹಾಡುವುದನ್ನು ಬಿಟ್ಟಿಲ್ಲ. ಮುಮ್ಮೇಳಕ್ಕೆ ಸರಿಯಾದವರಿಲ್ಲದಾಗ ಹಿಮ್ಮೇಳದವರೆಲ್ಲಿ ಬಂದಾರು!

# ಅಳೋಬ್ಯಾಡ ಪುಟ್ಟೋರಾಜು

ಹಾಡಿರುವವರು : ಚಿಕ್ಕಾಡೆ ಹೊನ್ನಮ್ಮ, ಕೋಂ ಚನ್ನಯ್ಯ ಮತ್ತು ನಾಲ್ಕು ಜನ ಸಂಗಾತಿಯರು.

ಹರಿಜನರ (ಎ.ಕೆ.) ಈಕೆ ಮಂಡ್ಯ ಜಿಲ್ಲೆ ಪಾಂಡವಪುರ ತಾಲ್ಲೂಕು ಚಿಕ್ಕಾಡೆಯವಳು. ೧೯೮೧ರಲ್ಲಿ ಕುಂತೀ ಬೆಟ್ಟದಲ್ಲಿ ನಾನು ನಡೆಸಿದ ಹಾಡುಗಾರಿಕೆ ಮೇಳದಲ್ಲಿ ಹೊನ್ನಮ್ಮ ನನ್ನ ಕಣ್ಣಿಗೆ ಬಿದ್ದಳು. ಆಮೇಲೆ ನಾನು ಆಕೆಯ ಬೆನ್ನು ಹತ್ತಿದೆ. ಅದೇ ವರ್ಷ ಪಾಂಡವಪುರಕ್ಕೇ ಕರೆಸಿಕೊಂಡು ಆಕೆಯ ಹಾಡುಗಳನ್ನು ಧ್ವನಿಮುದ್ರಿಸಿಕೊಂಡೆ. ಆಮೇಲೆ ಆಕೆಯ ಊರು ಚಿಕ್ಕಾಡೆಗೆ ಒಂದು ಲಗ್ನಕ್ಕೆ ಹೋಗಿದ್ದಾಗ ಆಕೆ ಹಾಡಿದ ಮದುವೆಯ ಪದ ಕೇಳಿ ಮೋಹಿತನಾಗಿ ಆಕೆಯನ್ನು ಬೆಂಗಳೂರಿಗೇ ಕರೆಸಿಕೊಂಡು ಮದುವೆ ಪದಗಳನ್ನೂ ಇನ್ನಿತರ ಹಾಡುಗಳನ್ನೂ ಸ್ಟುಡಿಯೋದಲ್ಲಿ ೧೯೮೭ರಲ್ಲಿ ಧ್ವನಿಮುದ್ರಿಸಿಕೊಂಡೆ.

ಹೊಲೇರ ಹೈದನ ಕಥೆ ಆಕೆಯ ಒಂದು ವಿಶಿಷ್ಟ ಹಾಡು. ರಾಜರ ಹೆಣ್ಣನ್ನು ಮೋಹಿಸಿದ ಹೊಲೇರ ಹೈದನಿಂದಾಗಿ ಅವರ ವಂಶವೇ ಹಾಳಾಗುತ್ತಿತ್ತು. ಆದರೆ ಮಡಿವಾಳ ಮಾಚಯ್ಯನಿಂದಾಗಿ ಇವನೊಬ್ಬ ಉಳಿದ.

ಮಹಾರಾಜರಿಂದ ಹನ್ನೆರಡು ತಾಳ, ಹನ್ನೆರಡು ಮೇಳ ತರುವಂತೆ ವಾಜರವನಿಗೆ ಅಪ್ಪಣೆಯಾಯಿತು. (ಆಗ ವಾಜರೂ ಹೊಲೇರೂ ಒಟ್ಟಿಗೇ ಊಟ ಮಾಡ್ತಿದ್ದರಂತೆ). ಆಗ ವಾಜರವನು ಹೊಲೇರ ಹೈದನ ಕೈಕಾಲು ಕಟ್ಟಿ ಅವ ನಿಂದ ರಾಜರ ಮುಂದೆ ತಾಳಮೇಳ ಮಾಡಿಸಿದ. ರಾಜನ ಅಪ್ಪಣೆಯಂತೆ ವಾಜರವನು ತನ್ನ ಮಗಳು ಕೊಟ್ಟು, ಹೊಲೇರ ಹೈದನಿಗೆ ಮದುವೆ ಮಾಡಿದ.

ಹೊನ್ನಮ್ಮನದು ಹೊನ್ನಿನಂಥ ಕಂಠ. ಸರಸತಿ ಮೇಲೆ, ಮಾದೇಶ್ವರನ ಮೇಲೆ, ಮುನಿಯಮ್ಮನ ಮೇಲೆ, ಬಸವೇಶ್ವರನ ಮೇಲೆ, ಸೀತಮ್ಮನ ಮೇಲೆ, ಮಹದೇವನ ಮೇಲೆ, ಸಿದ್ದಯ್ಯನ ಮೇಲೆ, ಚಾಮುಂಡಿ–ನಂಜಯ್ಯರ ಮೇಲೆ, ಹೆಗ್ಗಣನ ಮೇಲೆ ಮತ್ತು ಬೀಸುವಾಗ ಕುಟ್ಟು ವಾಗ ಮಾಮೂಲಾಗಿ ಹಾಡುತ್ತಾಳೆ. ಆಕೆಯ ಹಾಡಿನ ದನಿಗಳೂ ಪಲ್ಲವಿಗಳೂ ತುಂಬಾ ಸೊಗಸಾಗಿವೆ. ಕೂಲಿ ನಾಲಿಯಿಂದ ಜೀವನ. ಜಮೀನಿಲ್ಲ. ಆದರೆ ಆಕೆ ಸಕಲ ಸಂಪತ್ತಿರುವ ಮಹಾರಾಣಿಯವರಿಗಿಂತ ಸಂತೃಪ್ತಳು. ಇಂಥವರಲ್ಲೇ ಜನಪದ ಗೀತೆಗಳ ಗಣಿ ಇರುವುದು! ಕೆಸರು ಗದ್ದೆಯಲ್ಲಿ ನಾಟಿಹಾಕುವ ಕಷ್ಟದ ಕೆಲಸವನ್ನೂ ಹಗುರ ಮಾಡಿಕೊಳ್ಳುತ್ತಾರೆ ನಮ್ಮ ಹಳ್ಳಿಯ ಜನ ತಮ್ಮ ನಾಟಿ ಪದಗಳ ಹಾಡಿನಲ್ಲಿ.

## ಬಳುಕೊತ ಬೀದಿ ಮರೆದಾಳು

ಹಾಡಿರುವವರು : ಯಾಚೇನಹಳ್ಳಿ ನಿಂಗಮ್ಮ ಮತ್ತು ಸಂಗಾತಿಯರಾದ ಕಟ್ಟೆ ಸಿದ್ದಮ್ಮ ಮತ್ತು ವೆಂಕಟಮ್ಮ.

ನಿಂಗಮ್ಮ ಹರಿಜನರವಳು. ಕಟ್ಟೆ ಸಿದ್ದಮ್ಮ ಮತ್ತು ವೆಂಕಟಮ್ಮ ಒಕ್ಕಲಿಗರು. ಎಲ್ಲರೂ ಮೈಸೂರು ಜಿಲ್ಲೆ ಟಿ. ನರಸೀಪುರ ತಾಲ್ಲೂಕಿನವರು. ವಾಸ್ತವವಾಗಿ ನಿಂಗಮ್ಮ ಗಾಮನಹಳ್ಳಿಯವಳು. ಅವಳ ಹಾಡನ್ನು ಮೊಟ್ಟ ಮೊದಲು ಧ್ವನಿಮುದ್ರಣ ಮಾಡಿಕೊಂಡದ್ದು ೧೯೭೭ನೇ ೨೭ ಮತ್ತು ೨೮ರಲ್ಲಿ ಯಾಚೇನಹಳ್ಳಿಯಲ್ಲಿ. ಈ ಕಾರಣವೇ ಆಕೆಯನ್ನು ಯಾಚೇನಹಳ್ಳಿ ನಿಂಗಮ್ಮ ಎಂದು ಕರೆ ಯುತ್ತಾ ಬಂದೆ.

ನಿಂಗಮ್ಮನದು ಒಂದು ಬಗೆಯ ಅಲೆಮಾರಿ ಬಾಳು. ಗಂಡ ಮತ್ತು ಮಕ್ಕಳ ವಿಷಯ ಗೊತ್ತಿಲ್ಲ. ಒಬ್ಬ ಮಗಳನ್ನು ಮದುವೆಮಾಡಿ ಕೊಟ್ಟಿದ್ದೇನೆಂದು ಹೇಳು ತ್ತಾಳೆ. ಕೂಲಿನಾಲಿಯಿಂದಲೇ ಜೀವನ. ಆದರೆ ಕೂಲಿ ನಾಲಿ ಮಾಡಿ ಜೀವನ ಮಾಡುವುದು ಅವಳಿಗೆ ಕಷ್ಟವಾದ ಕೆಲಸ. ಹಾಡುವುದು, ಅಷ್ಟು ಇಷ್ಟು ಸಂಪಾದನೆ ಮಾಡು ವುದೇ ಅವಳಿಗೆ ಸುಲಭವಾದ ಜೀವನ.

೧೯೭೯ರಲ್ಲಿ ಯಾಚೇನಹಳ್ಳಿಯ ವಿದ್ಯಾವಂತ ತರುಣ ವೈ.ಎಸ್. ನಾಗರಾಜು ತಮ್ಮ ಊರಿಗೆ ನನ್ನನ್ನೂ ಆಕಾಶವಾಣಿಯ ಭೈರಪ್ಪನವರನ್ನೂ ಕರೆದುಕೊಂಡು ಹೋದರು. ಇನ್ನೂ ಸಂಸಾರ ಹೂಡದ ಹೊಸಮನೆಯೊಂದರಲ್ಲಿ ಬಿಡಾರ. ನಾಗರಾಜು ಮನೆಯಲ್ಲಿ ಊಟ. ಭೈರಪ್ಪ ನಾನು ಮೂರು ರಾತ್ರಿ ಒಂದೇ ಪರದೆಯೊಳಗೆ ಮಲಗಿದ್ದೆವು. ಬೆಳಗ್ಗೆ ಎದ್ದರೆ ಕಾಲುವೆ ಕಡೆ ಹೋಗುತ್ತಿದ್ದೆವು. ನಾನು ಎರಡು ದಿನಗಳು ಒಂದೇ ಸಮನೆ ಹಾಡುಗಳನ್ನು ರಿಕಾರ್ಡು ಮಾಡಿಕೊಂಡೆ. ಸೋ ಅಂದರೆ ರಾಗ ಗೊತ್ತಾಗುತ್ತೆ ಎಂದಹಾಗೆ ಅಷ್ಟೊಂದು ಜನರ ಹಾಡಿನಲ್ಲಿ ತನ್ನ ಮೊದಲ ಸೊಲ್ಲಿನಿಂದಲೇ ನನ್ನನ್ನು ಸೋಲಿಸಿದವಳು ನಿಂಗಮ್ಮ. ಆಕೆ ಮೊದಲು ಒಬ್ಬಳೇ ಹಾಡಲಾರಂಭಿಸಿದಳು. ಏಕೆಂದರೆ, ಆಕೆಗೆ ದನಿ ಕೊಡುವುದು ತುಂಬಾ ಕಷ್ಟ. ಅವಳ ಹಾಡಿನ ಧಾಟಿಯೇ ಹಾಗೆ. ಹಿಮ್ಮೇಳದವರೂ ಇಲ್ಲ ಆಕೆಗೆ. ಯಾವಾಗ ನಾನು ಆಕೆಯ ಹಾಡುಗಳನ್ನು ಮೆಚ್ಚಿಕೊಂಡು ಹಿಮ್ಮೇಳದವರನ್ನು ಸೇರಿಸಿಕೊಳ್ಳಮ್ಮ, ಇಲ್ಲದಿದ್ದರೆ ಒಬ್ಬಳೇ ಹಾಡೋದು ಕಷ್ಟ ಎಂದಾಗ ಆಕೆ ಒಕ್ಕಲಿಗರ ಜಾತಿಯ ಕಟ್ಟೆಸಿದ್ದಮ್ಮ ಮತ್ತು ವೆಂಕಟಮ್ಮನನ್ನು ಸೇರಿಸಿಕೊಂಡಳು. ಆದರೂ ಅವರೂ ಆಕೆಗೆ ಸರಿಬೀಳುವುದಿಲ್ಲ.

೧೯೮೦ನೇ ಅಕ್ಟೋಬರ್‌ನಲ್ಲಿ ಹತ್ತು ದಿವಸಗಳ ಕಾಲ ಬೆಂಗಳೂರಿನ ಹತ್ತುಕಡೆ ಕಾರ್ಪೊರೇಷನ್ನಿನ ಬಯಲು

ರಂಗಮಂಟಪಗಳಲ್ಲಿ ಮತ್ತು ರವೀಂದ್ರ ಕಲಾ ಕ್ಷೇತ್ರದಲ್ಲಿ ಸುಮಾರು ೧೦೦ ಜನರ ಹತ್ತು ಹದಿನೈದು ಕಲಾ ತಂಡ ಗಳನ್ನು ಕರೆಸಿದ್ದೆ. ಆಗ ಕಲಾಮೇಳಗಳನ್ನು ನಡೆಸಿದಾಗ ನಿಂಗಮ್ಮನನ್ನೂ ಕರೆಸಿದ್ದೆ: ಆಕೆಯ ಹಾಡು ಕೇಳಿದ ಜನ ಯಾವುದೋ ಲೋಕಕ್ಕೆ ಹೋಗಿಬಿಟ್ಟರು, ದಂಗಾಗಿ ಬಿಟ್ಟರು. ಆ ಕೋಗಿಲೆಯ ಕಂಠ, ಹಾಡಿನ ದನಿ ಧಾಟಿ ಗಳು, ಏರಿಳಿತಗಳು, ಸೊಲ್ಲು ಪಲ್ಲವಿ ಗಳು ಯಾರನ್ನೇ ಆಗಲಿ ಮರುಳು ಮಾಡುತ್ತವೆ. ಆಕೆಯ ಕಂಠ ಮಾಧುರ್ಯಕ್ಕೆ ಮರುಳಾಗಿ ಕೆಲವರು ಮನೆಗೆ ಕರೆದು ಕೊಂಡುಹೋಗಿ ಹಾಡಿಸಿ ಸೀರೆ ಕಣ ಬಾಗಿನ ಕೊಟ್ಟಿ ದ್ದುಂಟು

ಚುಂಚನಗಿರಿ ಭೈರವೇಶ್ವರ ಗೀತ ಗಾಯನ ಮೇಳ ವಾಗಲಿ, ಜಾನಪದ ಲೋಕದ ಕಾರ್ಯಕ್ರಮವಾಗಲಿ ಅಥವಾ ಮಂಡ್ಯ ಮದ್ದೂರುಗಳಲ್ಲಿ ಏನೇ ಜಾನಪದ ಕಾರ್ಯಕ್ರಮ ನಡೆಯಲಿ ನಿಂಗಮ್ಮ ಹಾಜರು. ಒಬ್ಬಳೇ ಹೊರಟುಬಿಡುತ್ತಾಳೆ. ಯಾರಾದರೂ ಹಾಡುತ್ತಿದ್ದರೆ ಆ ಹಾಡನ್ನು ಕೇಳುವುದಷ್ಟೇ ಅಲ್ಲ, ಅದನ್ನು ಕಲಿತೂ ಬಿಡು ತ್ತಾಳೆ. ಮಂಟೆಸ್ವಾಮಿ ಪದ, ಅರ್ಜುನ ಜೋಗಿಪದ ಮುಂತಾದ ಪದಗಳನ್ನು ಕಲಿತದ್ದು ಹೀಗೆ. ಅವಳಿಗೆ ಬರದ ಹಾಡುಗಳೇ ಇಲ್ಲ. ಚೆಲುವರಾಯ, ಮಂಟೇ ಸ್ವಾಮಿ, ಕೊಡಗಿನ ವೀರರಾಜ, ತಾಯಿ-ತೌರು, ಅಣ್ಣ-ತಮ್ಮ, ಅರ್ಜುನ ಜೋಗಿ, ದೇವರು ದಿಂಡರು ಅದರಲ್ಲೂ ಯಾಚೇನಹಳ್ಳಿಯ ದಂಡಿನ ಮಾರಮ್ಮ, ಬೀಸುವುದು,

ಭೈರುವನ ಮೇಲೆ, ಕಳದಪದ, ಬಸವೇಶ್ವರ, ಆಲಂಜಿ ತಾಯಿ, ಜೋಗುಳ ಮತ್ತು ದೂರಿ, ಕುಂತಿಪೂಜೆ, ಸಾರಂಗ ಧರಸಪದ, ಸೋಬಾನೆಪದ, ಬಳೆಗಾರಶೆಟ್ಟಿ, ತತ್ವ, ಶಿವ ರಾಯ, ಕಂಬದಮ್ಮ, ತಿರುಪತಿ ತಿಮ್ಮಪ್ಪ, ನಂಜಯ್ಯ ಚಾಮಾಯಿ, ಉತ್ತರದೇವಿ, ಹುಟ್ಟುಬಂಜೆ ಹೊನ್ನಮ್ಮ, ಬಸವಣ್ಣ-ಹೀಗೆ ಒಂದಲ್ಲ ಎರಡಲ್ಲ ಆಕೆಗೆ ಬರುವ ಹಾಡುಗಳು ನೂರಾರು. 'ನಿನಗೆ ಎಷ್ಟು ಹಾಡು ಬರ್ತ್ವೆ-ಕೇಳಾಕೆ ಎಷ್ಟು ದಿನಾ ಆಯ್ತದೆ' ಅಂತ ಕೇಳಿದರೆ. 'ಅಯ್ಯೋ ಅದೊಂದು ದೊಡ್ಡ ಸಾಗರ ಸ್ವಾಮಿ - ನೀವು ಎಷ್ಟು ದಿನ ಅಂತ ಕೇಳೀರಿ ? ನಿಮ್ಮ ಕೈಲಿ ಕೇಳ್ತಾ ಕುಂತಕಳ್ಳಾಕಾಗಲ್ಲಾ' ಅಂತಾಳೆ ನಿಂಗಮ್ಮ.

ಎಂತಹ ಹಾಡುಗಾತಿ! ಏನು ಮಾತು! ಎಂತಹ ಧೈರ್ಯ! ಗಂಡಸರೊಡನೆ ಕಳದ ಪದ ಹೇಳುತ್ತಾ ಸವಾಲ್ ಹಾಕಿದರೆ ಆ ಗಂಡಸು ಸುಮ್ಮನಾಗಬೇಕು. ಆಕೆಗೂ ಅದೇ ಊರಿನ ರಾಮೇಗೌಡನಿಗೂ ಯಾಚೇನ ಹಳ್ಳಿಯಲ್ಲಿಯೇ ಗಂಡು-ಹೆಣ್ಣಿನ ಪ್ರೇಮದ ಕಳದಪದಗಳು ಶುರುವಾದುವು. ಕೊನೆಗೆ ರಾಮೇಗೌಡ (ಒಕ್ಕಲಿಗರವನು) ಅವಳನ್ನು ಎದುರಿಸಲಾರದೆ ಸುಮ್ಮನಾದ. ಇಂತಹ ಅಸಾಧ್ಯ ಹೆಂಗಸು ಯಾಚೇನಹಳ್ಳಿ ನಿಂಗಮ್ಮ.

ಅವಳ ಜೊತೆ ಹಾಡುತ್ತಿದ್ದ ಕಟ್ಟೆ ಸಿದ್ದಮ್ಮ ಮತ್ತು ವೆಂಕಟಮ್ಮ ಅವಳಿಂದ ಈಗ ದೂರವಾಗಿದ್ದಾರೆ. ಆಕಾಶ ವಾಣಿ, ಟ್ರಸ್ಟು ಮುಂತಾದ ಕಡೆಗಳಿಂದ ಬಂದ ದುಡ್ಡೇ

ಅವರ ಮನಸ್ತಾಪಕ್ಕೆ ಕಾರಣ. ಇಂತಹ ಮನಸ್ತಾಪಗಳು ಬೇರೆಯವರಲ್ಲಿಯೂ ಅಲ್ಲಲ್ಲಿ ಕಾಣುತ್ತಿವೆ. ದುಡ್ಡಿಲ್ಲದೆ ಹಾಡುತ್ತಿದ್ದಾಗ ಇಲ್ಲದ ಹೊಟ್ಟೆಕಿಚ್ಚು ಈಗ ದುಡ್ಡು ಸಿಗಲಾರಂಭಿಸಿದ ಮೇಲೆ ಶುರುವಾಗಿದೆ.

ಕಟ್ಟೆ ಸಿದ್ದಮ್ಮನ ಬಾಳೊಂದು ಬಗೆ. ಯಾರ ಮನೆಯಲ್ಲಿ ಮಕ್ಕಳು ಹುಟ್ಟಲಿ ಆ ಮಕ್ಕಳಿಗೆ ಸ್ನಾನ ಮಾಡಿಸುವ ಕಾಯಕ ಅವಳದು. ದೂರಿ ಪದ ಹಾಡುವುದರಲ್ಲಿ ಈಕೆ ನಿಸ್ಸೀಮಳು. ಹಾಗೆಯೇ ಕುಂತೀಪದದಲ್ಲೂ ಸಹ. ಮದರ್ ಥೆರೇಸಾ ಎಂದೇ ನಾನೀಕೆಯನ್ನು ಕರೆದಿದ್ದೇನೆ- ಈಕೆ ಮಾಡುತ್ತಿರುವ ನಿಸ್ವಾರ್ಥ ಸೇವೆಯನ್ನು ಕಂಡು. ಥೆರೇಸಾಗೆ ಭಾರತ ರತ್ನ ಸಿಕ್ಕಿದೆ. ಆದರೆ ಕಟ್ಟೆ ಸಿದ್ದಮ್ಮನಿಗೆ ಉಟ್ಟುಕೊಳ್ಳುವ ಸೀರೆಗೂ ಗತಿ ಇಲ್ಲ. ಮಾಸಾಶನಕ್ಕೆ ಪ್ರಯತ್ನ ಮಾಡುತ್ತಿದ್ದಾಳೆ. ಮಿಂಗ ಉಣ್ಣೋ ಕಾಲಕ್ಕೆ ಬರ ಬಂತು ಅಂದಹಾಗೆ ಸರ್ಕಾರ ಮಾಸಾಶನ ಕೊಡುವುದನ್ನು ಕಳೆದ ಮೂರು ವರ್ಷಗಳಿಂದ ನಿಲ್ಲಿಸಿಬಿಟ್ಟಿದೆ. ಪಾಪ ಅದಕ್ಕಾಗಿ ಅವಳೂ ವೆಂಕಟಮ್ಮನೂ ಅಲೆಯುತ್ತಿದ್ದಾರೆ ಬೆಂಗಳೂರಿಗೆ. ನಿಂಗಮ್ಮನಿಗೆ ಮಾಸಾಶನ ಸಿಕ್ಕಿಬಿಟ್ಟಿತು. ಅದೂ ಒಂದು ಕಾರಣ ಇವರ ಮನಸ್ತಾಪಕ್ಕೆ.

## ಚಿಕ್ಕೊಕ್ಕೀಳೆ ಚಿತರಂಗಿ

ಹಾಡಿರುವವರು : ಬೆಂಗಳೂರು ಜಿಲ್ಲೆ, ದೊಡ್ಡ ಬಳ್ಳಾಪುರ ತಾಲ್ಲೂಕು, ನಾರನಹಳ್ಳಿ ರಂಗಮ್ಮ ಮತ್ತು ಗಂಗಮ್ಮ.

ಚುಂಚನಗಿರಿಯಲ್ಲಿ 1979ರಲ್ಲಿ ಆರಂಭವಾದ ಭೈರವೇಶ್ವರ ಗೀತ ಗಾಯನ ಮೇಳದಲ್ಲಿ ಈ ಹಾಡುಗಾತಿಯರನ್ನು ಗುರುತಿಸಿದೆ. ಸಾರಂಗಧರನ ಕಥೆಯ ಧಾಟಿಯನ್ನು ಕೇಳಿದ ಕೂಡಲೇ ಇದೊಂದು ಅಪರೂಪದ ಧಾಟಿಯೆಂದು ಮನಗಂಡು 13-7-1981ರಲ್ಲಿ ಇವರ ಸಾರಂಗಧರನ ಹಾಡನ್ನೂ ಇನ್ನಿತರ ಹಾಡುಗಳನ್ನು ಟ್ರಸ್ಟಿನಲ್ಲಿ ಧ್ವನಿ ಮುದ್ರಿಸಿಕೊಂಡೆ. ಈ ಹಾಡಲ್ಲದೆ ಇವರು ಹಾಡುವ ಬಳೆಶೆಟ್ಟಿ, ಉತ್ತರದೇವಿ, ಮುದಗದಕೆರೆ ಹಾಡು, ಭೈರುವ, ಮಾರಮ್ಮ, ಮಳೆರಾಯ, ಸೋಬಾನೆ, ಮೈನೆರೆದಹಾಡು, ಸೋದರಮಾವ, ಆರತಿ – ಈ ಹಾಡುಗಳನ್ನೆಲ್ಲಾ ಧ್ವನಿ ಮುದ್ರಿಸಿಕೊಂಡೆ.

ಒಂದೆರಡು ವರ್ಷಗಳ ಹಿಂದೆ ಬೊಂಬಾಯಿಂದ ಒಬ್ಬ ಸಿನೆಮಾ ಷೂಟಿಂಗ್ ಸಲಕರಣೆಗಳ ಸಮೇತ ಬಂದು ರಷ್ಯಾದಲ್ಲಿ ನಡೆಯುವ ಭಾರತ ಉತ್ಸವಕ್ಕೆ ಹೆಣ್ಣು ಮೈನೆರೆದಾಗ ನಡೆಸುವ ಸಂಪ್ರದಾಯಗಳನ್ನೂ ಹಾಡು

ಗಳನ್ನೂ ಚಿತ್ರೀಕರಿಸಲು ಸಹಾಯ ಮಾಡಬೇಕೆಂದು ಕೇಳಿಕೊಂಡ. ಆಗ ನನಗೆ ಜ್ಞಾಪಕ ಬಂದದ್ದು ನಾರನಹಳ್ಳಿಯ ಈ ಆದಿಕರ್ನಾಟಕ ಜಾತಿಯ ಹೆಂಗಸರು. ನಾವೆಲ್ಲ ನಾರನಹಳ್ಳಿಗೆ ಹೋದೆವು. ನಮ್ಮ ಅದೃಷ್ಟಕ್ಕೆ ಆಗತಾನೆ ಸೋಬನವಾಗಿದ್ದ (ಮೈನೆರೆದಿದ್ದ) ಅದೇ ಜಾತಿಯ ಹೆಣ್ಣೊಂದಿತ್ತು. ಸರಿ, ಆಲ, ಬಸಿರಿ ಮುಂತಾದ ಹಸಿರು ಸೊಪ್ಪುಗಳನ್ನು ತರಿಸಿ ಒಬ್ಬರ ಮನೆಯ ಜಗಲಿಯ ಮೇಲೆ ಗುಡಸ್ಲು ಹಾಕಿಸಿದೆವು. ಹೆಣ್ಣಿಗೆ ಹೊಸ ಸೀರೆ ಉಡಿಸಿ ಗುಡಸ್ಲು ಕೂಡಿದೆವು. ಅವಳಿಗೆ ಹಾಕಬೇಕಾದ ಒಸಗೆ ಸಾಮಾನು - ತಂಬಿಟ್ಟು, ಚಿಗಳಿ, ಕೊಬರಿ, ಬೆಲ್ಲ-ಇವುಗಳ ತಟ್ಟೆಗಳನ್ನು ಮಾಡಿಸಿ ಹೆಣ್ಣಿನ ಮುಂದಿಟ್ಟೆವು. ರಂಗಮ್ಮ ಗಂಗಮ್ಮ ಮೈನೆರೆದಾಗ ಹಾಡುವ ಪದ ಹಾಡಿದರು. ಕ್ರೇನ್ ವಗ್ಗೈರೆ ಉಪಯೋಗಿಸಿ ಎಲ್ಲವನ್ನೂ ಷೂಟಿಂಗ್ ಮಾಡಿಕೊಳ್ಳಲಾಯಿತು. ಹೆಣ್ಣಿಗೂ, ಹಾಡಿದವರಿಗೂ, ತಟ್ಟೆ ವಗ್ಗೈರೆ ತಯಾರಿಸಿಕೊಟ್ಟವರಿಗೂ ದುಡ್ಡನ್ನೇನೊ ಬೊಂಬಾಯಿವಾಲ ಕೊಟ್ಟ. ಆದರೆ ತೆಗೆದ ಪಿಕ್ಚರ್‌ನ ಒಂದು ವಿಡಿಯೋ ಕ್ಯಾಸೆಟ್ ಕಳುಹಿಸಿಕೊಡುತ್ತೇನೆಂದು ಹೇಳಿದವನು ಕೈಕೊಟ್ಟ. ಅವನ ಅಡ್ರಸ್ಸೇ ಇಲ್ಲ. ಉತ್ತರದವರು ದಕ್ಷಿಣಕ್ಕೆ ಬಂದು ಮಾತಿನಲ್ಲಿ ನಮ್ಮನ್ನು ಮರಳು ಮಾಡಿ ತಮ್ಮ ಕೆಲಸ ಮಾಡಿಕೊಂಡು ಹೋಗುತ್ತಾರೆ. ನಾವೂ ಮೇಲೆ ಬಿದ್ದು ಅವರಿಗೆ ಸಹಾಯ ಮಾಡುತ್ತೇವೆ; ಆದರೆ ಅವರು ಮಾತ್ರ ಮಾತಿನಂತೆ ನಡೆದುಕೊಳ್ಳುವುದು ಅಪರೂಪ.

## ತಿಂಗು ತಿಂಗಳಿಗೆ ತಿಂಗಳುಮಾವನ ಪೂಜೆ

ಹಾಡಿರುವವರು: ತುಮಕೂರು ಜಿಲ್ಲೆ ತುರುವೇಕೆರೆ ತಾಲ್ಲೂಕು ಕಣಿಕಲ್ಕೆರೆ ನಿಂಗಮ್ಮ.

ಕುರುಬರ ಜಾತಿಯ ಸುಮಾರು ೫೦ ವರ್ಷ ವಯಸ್ಸಿನ ಕಂಚಿನಂಥ ಕಂಠದ ಈ ನಿಂಗಮ್ಮನನ್ನು ಗುರುತಿಸಿದ್ದು ಚುಂಚನಗಿರಿ ಭೈರವೇಶ್ವರ ಗೀತ ಗಾಯನ ಮೇಳದಲ್ಲೇ. ಈ ಗೀತಗಾಯನ ಮೇಳದಿಂದ ಒಂದು ಕ್ರಾಂತಿಯೇ ಆಗುತ್ತಿದೆ ಎನ್ನಬಹುದು. ಹಾಡುವುದನ್ನು ಬಿಟ್ಟಿದ್ದವರು ಈಗ ಮತ್ತೆ ಹಾಡಲಾರಂಭಿಸಿದ್ದಾರೆ. ಚಿಕ್ಕ ವಯಸ್ಸಿನವರು ಈಗ ಕಲಿಯಲಾರಂಭಿಸಿದ್ದಾರೆ! ಇಂಥಾ ಗೀತ ಗಾಯನ ಮೇಳವನ್ನು ಮಲೆಮಾದೇಶ್ವರನ ಮೇಲೆ, ನಂಜನಗೂಡು ನಂಜುಂಡೇಶ್ವರನ ಮೇಲೆ, ಮೇಲುಕೋಟೆ ಚಲುವರಾಯಸ್ವಾಮಿ ಮೇಲೆ, ಎಡೆಯೂರು ಸಿದ್ಧಲಿಂಗೇಶ್ವರನ ಮೇಲೆ, ಬೇಲೂರು ಚನ್ನಕೇಶವಸ್ವಾಮಿ ಮೇಲೆ, ತಿರುಪತಿ ವೆಂಕಟೇಶ್ವರನ ಮೇಲೆ ನಡೆಸಿ ಎಂದು ಅಂಗಲಾಚಿ ೧೯೭೯ರಲ್ಲಿಯೇ ಆಯಾ ದೇವಸ್ಥಾನಗಳ ಯಜಮಾನರುಗಳಿಗೆ ಪತ್ರ ಬರೆದೆ. ಆದರೆ ಯಾರಿಗೂ ಈ ಮಹತ್ವದ ವಿಷಯ ಅರ್ಥವಾಗಲಿಲ್ಲ. ಚುಂಚನಗಿರಿ ಮಹಾಸ್ವಾಮಿ

ಗಳೊಬ್ಬರೇ ನನ್ನ ಉದ್ದೇಶವನ್ನು ಅರ್ಥ ಮಾಡಿಕೊಂಡ ವರು. ಕೂಡಲೇ ಗೀತಗಾಯನ ಮೇಳವನ್ನು ಆರಂಭಿಸಿ ದರು. ಸುಮಾರು ಮೂರು ಸಾವಿರ ಜನಕ್ಕೆ ಮೂರು ದಿನ ಊಟೋಪಚಾರ, ಬಸ್‌ಚಾರ್ಜು, ಸೀರೆ ಕಣ, ಪಂಚೆ ಟವಲು ಎಂದರೆ ಎಷ್ಟಾಗುತ್ತೆ ನೋಡಿ! ಬಹು ಪುರಾತನ ಪೀಠವನ್ನಲಂಕರಿಸಿರುವ ಆ ಮಹಾ ಚೇತನವು ಮಾತ್ರ ಕೊಂಚವೂ ಧೈರ್ಯಗೆಡದೆ ಹಸನ್ಮುಖದಿಂದ ಈ ಮಹಾ ಗಾನಯಜ್ಞವನ್ನು ನಡೆಸಿಕೊಂಡು ಬರುತ್ತಿದೆ. ಇಂತಹ ಮಹಾಸ್ವಾಮಿಗಳಿಗೆ ಕೋಟಿ ಕೋಟಿ ಗ್ರಾಮೀಣ ಕಲಾ ವಿದರ ಪರವಾಗಿ ನನ್ನ ಸಹಸ್ರ ಪ್ರಣಾಮಗಳು.

ಕಣಿಕಲ್ಕೆರೆ ನಿಂಗಮ್ಮ ತಿಂಗಳುಮಾವನ ಪದ ಅಲ್ಲದೆ ಮಳೆರಾಯನ ಮೇಲೆ, ಶಿವನು ಗಿರಿಜೆ ತರುವುದು, ಹೊನ್ನಾಲದೇವಿ ಮೇಲೆ, ಮಾಲೀಕಾರನ ಕಂಟ್ಟೆ ಓಡಿ ಹೋದಳು ಬಾಲೆ, ಬಾಣಂತಿ ಪದ - ಇವನ್ನೆಲ್ಲಾ ಹಾಡು ತ್ತಾಳೆ. ರುಕ್ಮಿಣಿ ಬಾಣಂತಿಯಾಗಿದ್ದರೂ ಕೃಷ್ಣ ಆಕೆಯ ಸಹವಾಸ ಬೇಕೆಂದಾಗ ಅದನ್ನು ತಡೆದ ಆಕೆ ಹಾಡನ್ನು ಹಾಡುತ್ತಾಳೆ. ಇಂತಹ ಪದಗಳು ಅಪರೂಪ. ಇಲ್ಲಿಯ ವರೆಗೆ ನನಗೆ ಇಂಥ ಪದ ಸಿಕ್ಕಿರುವುದು ಹಗರಿಬೊಮ್ಮನ ಹಳ್ಳಿ ತಾಲ್ಲೂಕು ಬಾಚಗೊಂಡನಹಳ್ಳಿಯ ಮರಿಯಕ್ಕ ಮತ್ತು ಸಂಗಡಿಗರು ಹಾಡಿದ ವಿಶೇಷ ಧಾಟಿಯ ಹಾಡು.

## ಹೂವ ಕುಯ್ಯನ ಬನ್ನಿ

ಹಾಡಿರುವವರು : ಬನ್ನೂರು ಕೆಂಪಮ್ಮ ಮತ್ತು ಸಂಗಡಿಗರು.

ಇತ್ತೀಚೆಗೆ ಮಾತ್ರ ನನ್ನ ಧ್ವನಿಮುದ್ರಿಕೆಯಲ್ಲಿ ಸೇರಿ ಹೋಗಿರುವವಳೆಂದರೆ ಬನ್ನೂರು ಕೆಂಪಮ್ಮ. ಮೈಸೂರು ಜಿಲ್ಲೆ ಟಿ. ನರಸೀಪುರ ತಾಲ್ಲೂಕು ಬನ್ನೂರಿನ ದಕ್ಷಿಣ ಬೀದಿಯಲ್ಲಿ ಎ.ಕೆ. ಮಾದಯ್ಯನ ಹೆಂಡತಿಯಾಗಿ ನೆಲೆ ಸಿರುವ ೫೩ ವರ್ಷದ ಕೆಂಪಮ್ಮ 'ಆಗಾಗ್ಗೆ' ನನ್ನನ್ನು ಬೆಂಗ ಳೂರಿಗೆ ಕರೆಸಿ ನಿಮ್ಮ ಟ್ರಸ್ಟಿನಲ್ಲಿ ಹಾಡಿಸಿ, ನನ್ನ ಹಾಡನ್ನು ಧ್ವನಿಮುದ್ರಿಸಿಕೊಳ್ಳಿ' ಎಂದು ಬರೆಯುತ್ತಲೇ ಇದ್ದಳು. ಯಾರೋ ಸಾಮಾನ್ಯ ಗಾಯಕಿ ಇರಬೇಕೆಂದುಕೊಂಡು ನಾನು ಸುಮ್ಮನಿದ್ದೆ. ಕೊನೆಗೆ ಆಕೆ ಒತ್ತಾಯವಾಗಿ ಬರೆಸಿದ ಮೇಲೆ ನಾನು ೧೯೮೭ರಲ್ಲಿ ಆಕೆಯನ್ನು ಬೆಂಗಳೂರಿಗೆ ಕರೆ ಸಿದೆ. ಧ್ವನಿಮುದ್ರಿಕಾಲಯದಲ್ಲಿ ಆಕೆ ಮಟ್ಟವಾಗಿ ಕಂಠತು ಹಾಡಲು ಆರಂಭಿಸಿದಾಗ ನಾನು ದಂಗಾಗಿ ಹೋದೆ! ಅದೇನು ಕಂಠ, ಅದೇನು ಧಾಟಿ, ಅದೇನು ರಾಗ ತಾಳಗಳ ಜ್ಞಾನ!! ಭೇಷ್ ಎಂದೆ. ಮೈಸೂರು ಆಕಾಶವಾಣಿಯಲ್ಲಿ ಹನ್ನೆರಡು ಸಲ ಹಾಡಿರುವ ಈಕೆ ಎಲ್ಲರಿಗಿಂತ ಒಂದು ಬಗೆ

ಯಲ್ಲಿ ವಿಶಿಷ್ಟ ಕಲಾವಿದೆ ಎನ್ನಬಹುದು. ಅವಳ ಧಾಟಿಗಳೇ ಒಂದು ತರಹ. ಆಧುನಿಕರ ಅಥವಾ ನಾಟಕದ ಮಟ್ಟುಗಳಲ್ಲಿ ಬರುವ ಧಾಟಿಗಳನ್ನು ಆಕೆ ಸಲೀಸಾಗಿ ತನ್ನ ಹಾಡಿನಲ್ಲಿ ಜೋಡಿಸಿಬಿಡುತ್ತಾಳೆ. 'ನಮ್ಮಯ ಗುರಿ ಒಂದೇ, ನಮ್ಮಯ ಗುರಿ ಒಂದೇ' - ಇದು ನಮ್ಮ ಗ್ರಾಮೀಣ ಪಲ್ಲವಿಯಲ್ಲ. ಯಾರೋ ಈಗಿನವರು, ಬಹುಶಃ ರೈತ ಸಂಘದವರು-ಕಟ್ಟಿಕೊಂಡ ಪಲ್ಲವಿ. ಆದರೂ ಅದನ್ನು ಕೆಂಪಮ್ಮ ಕರಿಯಪ್ಪಸ್ವಾಮಿ ಮೇಲೆ ಹಾಡು ವಾಗ ಉಪಯೋಗಿಸಿಕೊಂಡುಬಿಟ್ಟಿದ್ದಾಳೆ. ಬನ್ನೂರು ಹತ್ತಿರದ ರಂಗಸಮುದ್ರದಲ್ಲಿ ಆ ಊರಿನ ಹರಿಜನರೇ ಆಡುವ ಸತ್ಯಮೂರ್ತಿ ನಾಟಕ ನೋಡಿ 'ಏನು ಈ ವಿಧಿ ಲೀಲೆ', 'ನೀಲಾ ವನಮಾಲಾ', 'ತಂಗಾಳಿ ತಂಗ ನರಗುಪು' ಎಂಬೀ ಹಾಡುಗಳನ್ನು ಬಹು ಸೊಗಸಾಗಿ ಹಾಡುತ್ತಾಳೆ. ಅಷ್ಟೊಂದು ಚುರುಕು ಆಕೆಯ ಬುದ್ಧಿ. ನಶ್ಯ ಹಾಕುವ ಚಟದ ಈ ಹೆಂಗಸು ನಶ್ಯದ ಡಬ್ಬಿಯನ್ನೇ ಚಿಟಕಿ ತಾಳ ವಾಗಿ ಮಾಡಿಕೊಂಡು ಕೇಳಿದವರ ಮೈಮರೆಸುವ ರೀತಿ ಯಲ್ಲಿ ಹಾಡುತ್ತಾಳೆ. ಈ ಮಾರಾಗಿತ್ತಿ ಹಾಡುವ ಹಾಡು ಗಳೆಂದರೆ : ಸರಸ್ವತಿ ಮೇಲೆ, ಬೀಸುವ ಪದ, ಸೀಹಳ್ಳಿ ಹುಚ್ಚಮ್ಮನ ಮೇಲೆ, ಸಿದ್ದಪ್ಪಾಜಿ ಮೇಲೆ, ಸೋಬಾನೆ ಪದ, ಮಾದೇವನ ಮೇಲೆ, ಬಿಳಿಗಿರಿರಂಗಸ್ವಾಮಿ ಮೇಲೆ, ಉತ್ತರದೇವಿ ಮೇಲೆ, ಅತ್ತೆ ಕುಣಿಸೋ ತಮಾಷೆ ಪದ, ಬನ್ನೂರು ಕರಿಯಪ್ಪಸ್ವಾಮಿ ಮೇಲೆ, ಗಂಗೆ – ಶಿವನ

ಮೇಲೆ, ಸತ್ತವರನ್ನು ಸ್ವರ್ಗಕ್ಕೆ ಸೇರಿಸೋ ಪದ (ಹೆಂಗಸರು ಈ ಹಾಡನ್ನು ಹಾಡುವುದು ನನಗೆ ಗೊತ್ತಿರುವಂತೆ ಇದೇ ಮೊದಲು), ಚಾಮುಂಡಿ ಮೇಲೆ ಇತ್ಯಾದಿ. ಈ ಪ್ರತಿಭಾವಂತ ಕಲಾವಿದೆಯನ್ನು ಕೊಂಚ ಹತೋಟಿಯಲ್ಲಿಡುವುದು ಆವಶ್ಯಕ. ಏಕೆಂದರೆ, ಮೂಲ ಜನಪದ ಧಾಟಿಗಳನ್ನು ಬದಲಾಯಿಸಿ ನಾಟಕದ ಮಟ್ಟುಗಳಿಗೋ ಸಿನೆಮಾ ಮಟ್ಟುಗಳಿಗೋ ತಿರುಗಿಸಿ ಹಾಡುವ ಆಚಾತುರ್ಯ ಈಕೆಯಿಂದ ಆಗಬಹುದು, ಇದಾಗದಂತೆ ನೋಡಿಕೊಳ್ಳಬೇಕು. ಈಕೆ ಹಾಡುವ 'ನೋಡವಳಂದಾವ ಮುತ್ತಿನ ಮಾಲೆ ಚಂದಾವ' ಎಂಬ ಹಾಡು ಬಿ.ಕೆ. ಸುಮಿತ್ರಾ ಹಾಡಿರುವ ಹಾಡನ್ನು ಮೀರಿಸುತ್ತದೆ. ಆದರೆ ಯಾರಿಂದ ಯಾರು ಕಲಿತರು ಎಂಬುದು ಗೊತ್ತಾಗಿಲ್ಲ.

ಇನ್ನೂ ಈಕೆಯ ಶಕ್ತಿ ಆಸಕ್ತಿಗಳನ್ನು ತಿಳಿಯಬೇಕಾಗಿದೆ, ಅಳೆಯಬೇಕಾಗಿದೆ.

## ಸುವ್ವಕ್ಕಾ ಸುವ್ವನಾರಿ

ಹಾಡಿರುವವರು: ಗುಲ್ಬರ್ಗಾ ಜಿಲ್ಲೆ, ಚುಂಚೋಳಿ ಮಧುರಾಬಾಯಿ ಶರ್ಮಾ ಮತ್ತು ಸಂಗಾತಿಯರು.

೧೬-೮-೧೯೮೧ ರಂದು ಗುಲ್ಬರ್ಗಾದಲ್ಲಿ ಜಿಲ್ಲಾ ಜಾನಪದ ಕಲಾ ಮಹೋತ್ಸವದ ಏರ್ಪಾಡಾಗಿತ್ತು, ಆ ಮಹೋತ್ಸವದಲ್ಲಿ ಭಾಗವಹಿಸಲು ನೂರಾರು ಕಲಾವಿದರು ಬಂದಿದ್ದರು. ಅವರಲ್ಲಿ ಮಧುರಾಬಾಯಿ ಶರ್ಮಾ ಒಬ್ಬಾಕೆ.

ಉತ್ತರ ಕರ್ನಾಟಕದ ಹಿಂದೂ – ಮುಸ್ಲಿಮರಲ್ಲಿ ದಕ್ಷಿಣ ಕರ್ನಾಟಕದಲ್ಲಿ ಕಂಡುಬರುವ ವ್ಯತ್ಯಾಸಗಳು ಕಂಡು ಬರುವುದಿಲ್ಲ. ಮುಸ್ಲಿಮರ ಉಡುಪು, ಮಾತು, ನಡತೆ ಇವೆಲ್ಲಾ ಹಿಂದೂಗಳವರಂತೆಯೇ ಇರುತ್ತವೆ. ಬಸವಣ್ಣನ ದೇವಸ್ಥಾನಕ್ಕೆ ಮುಸಲ್ಮಾನರು ಬರುತ್ತಾರೆ. ದರ್ಗಾ ಮುಂತಾದ ಮುಸಲ್ಮಾನರ ಪೂಜಾ ಸ್ಥಳಗಳಿಗೆ ಹಿಂದೂಗಳು ಹೋಗುತ್ತಾರೆ. ಲಾವಣಿ, ಗೀಗೀ ಮುಂತಾದ ಹಾಡುಗಳನ್ನು ಕಟ್ಟಿರುವವರು ಬಹುಮಟ್ಟಿಗೆ ಮುಸಲ್ಮಾನರು. ಆದರೆ ಅವನ್ನು ಹಾಡುವವರು ಹೆಚ್ಚು ಮಂದಿ

ಹಿಂದುಗಳೇ. ಶಿಶುನಾಳರು ಮುಸಲ್ಮಾನರಾದರೂ ಅವರ ಗುರು ಗೋವಿಂದಭಟ್ಟರು. ಅವರ (ಶಿಶುನಾಳರ) ಹಾಡು ಗಳು ಅಪ್ಪಟ ಕನ್ನಡದಲ್ಲಿದ್ದು ಬಹು ಪ್ರಚಾರದಲ್ಲಿವೆ. ಹೀಗಾಗಿ ಹಿಂದೂ - ಮುಸ್ಲಿಮರ ನಿಜವಾದ ಭಾವೈಕ್ಯತೆ ಯನ್ನು ನಾವು ಉತ್ತರ ಕರ್ನಾಟಕದಲ್ಲಿ ಕಾಣಬಹುದು.

ಇನ್ನು ಹಿಂದೂಗಳಲ್ಲಿಯೇ ನಾವು ಮೇಲ್ವರ್ಗದ ಜನರಾದ ಬ್ರಾಹ್ಮಣರ ನಡೆನುಡಿಗಳಿಗೂ ಬೇರೆ ವರ್ಗದ ಜನರ ನಡೆನುಡಿಗಳಿಗೂ ಸಾರ್ವಜನಿಕವಾಗಿ ಅಂತಹ ವ್ಯತ್ಯಾಸವನ್ನು ಕಾಣಲಾರೆವು. ಮಾತಿನ ರೀತಿ, ಉಡುಪಿನ ಬಗೆ ಇವೆಲ್ಲಾ ಒಂದೇ ಆಗಿರುತ್ತವೆ. ಅವರ ಹೆಣ್ಣು ಮಕ್ಕಳ ಮಾತೂ ಹಾಡುಗಳೂ ಬಹುಮಟ್ಟಿಗೆ ಸಾಮಾನ್ಯ ಜನರ ಮಾತು ಮತ್ತು ಹಾಡುಗಳನ್ನು ಹೋಲುತ್ತವೆ. ಅವರ ಹೆಂಗಸರು ಮಥುರಾಬಾಯಿ, ಕಮಲಾಬಾಯಿ ಹೀಗೆಲ್ಲ ಹೆಸರು ಇಟ್ಟುಕೊಂಡರೆ, ತೀರಾ ಕೆಳವರ್ಗದ ಹರಿ ಜನರ ಹೆಂಗಸರೂ ಫಕೀರಬಾಯಿ, ಕಾಶೀಬಾಯಿ-ಹೀಗೆಲ್ಲ ಇಟ್ಟುಕೊಳ್ಳುತ್ತಾರೆ. ಹೀಗಿರುವಾಗ ಈ ಕಂಟ್ಟುವ ಹಾಡನ್ನು ಬ್ರಾಹ್ಮಣರ ಮಥುರಾಬಾಯಿ ಶರ್ಮಾ ಹಾಡಿ ದ್ದರಲ್ಲಿ ಆಶ್ಚರ್ಯವೇನಲ್ಲ. ಸುಮಾರು ೫೦ ವರ್ಷದ ಆಕೆ ತನ್ನ ಗೆಳತಿಯರ ಸಮೇತ ಹಾಡಿದ ಈ ಹಾಡನ್ನು ಮತ್ತು ಹೇಮರೆಡ್ಡಿ ಮಲ್ಲಮ್ಮ, ಸೋಬಾನೆ ಪದ, ಅಣ್ಣ-ತಂಗಿ ಹಾಡು, ಕೋಲಿನ ಹಾಡು, ಮೊಹರಂ ಹಾಡು ಮುಂತಾದ

ಹಾಡುಗಳನ್ನು ಸದಾಶಿವನಿಗೆ ಅದೇ ಗ್ಯಾನ ಎಂಬಂತೆ ಸದಾ ಟೇಪ್ ರೆಕಾರ್ಡರನ್ನು ಜೊತೆಯಲ್ಲೇ ಇಟ್ಟುಕೊಂಡಿರುವ ನಾನು ೧೬-೮-೮೧ರಂದು ಗುಲ್ಬರ್ಗಾದಲ್ಲಿ ಧ್ವನಿಮುದ್ರಣ ಮಾಡಿಕೊಂಡೆ.

ದ ಣ ಕರ್ನಾಟಕದಲ್ಲಿ ಆಗಿರುವಷ್ಟು ಕೆಲಸ ಉತ್ತರ ಕರ್ನಾಟಕದಲ್ಲಿ ಜನಪದ ಕಲಾವಿದರ ಬಗ್ಗೆ ಆಗಿಲ್ಲ ಎಂದು ಹೇಳಬಹುದು. ಉ. ಕ. ದ. ವಿದ್ಯಾವಂತರಾದವರು ಸಾಮಾನ್ಯವಾಗಿ ಒಂದೆರಡು ಜನಪದ ಗೀತೆಗಳನ್ನು ಬಾಯಿ ಪಾಠ ಮಾಡುವುದು, ಅವುಗಳನ್ನು ಸಭೆಗಳಲ್ಲಿ ಹಾಡುವುದು ಮಾತ್ರ ತಾವೇ ಹಾಡುಗಳನ್ನು ರಚಿಸಿ ಅವೇ ಜನಪದ ಗೀತೆಗಳೆಂದು ಹಾಡುವುದೇ ಆಗಿದೆ. ಹೀಗಾಗಿ ಜನಪದ ಹಾಡುಗಾತಿಯರ ಮಾತ್ರ ಬೇರೆ ಜನಪದ ಕಲಾವಿದರ ಕಡೆ ಸಾಕಷ್ಟು ಗಮನ ಕೊಟ್ಟಿಲ್ಲ. ಅಪಾರ ಭಂಡಾರವೇ ಅವರಲ್ಲಿದೆ. ಈ ಬಗ್ಗೆ ಗಮನ ಕೊಡುವುದು ಅಗತ್ಯ.

## ಸೋಬಾನ ಬನ್ನಿರೇ

ಹಾಡಿರುವವರು : ಕಾಡು ಅಂಕನಹಳ್ಳಿ ಮರಿ ಅರಸಮ್ಮ, ಲಕ್ಷ್ಮಮ್ಮ ಮತ್ತು ಕೆಂಪಮ್ಮ ಎಲ್ಲರೂ ಒಕ್ಕಲಿಗರು.

ಹಳ್ಳಿಯ ಅಸಂಖ್ಯಾತ ಕಲಾವಿದರಿಗೆ, ಅದರಲ್ಲಿಯೂ ಹೆಂಗಸರಿಗೆ, ಅವರ ಕಲಾ ಪ್ರದರ್ಶನಕ್ಕೆ ಹೆಚ್ಚಿನ ಅವಕಾಶ ದೊರಕಿಸಿಕೊಡಬೇಕೆಂಬ ಉದ್ದೇಶದಿಂದ ನಾನು ನಾಗ ಮಂಗಲ ತಾಲ್ಲೂಕು ಬೆಳ್ಳೂರು ಹೋಬಳಿ ಕಲಾಮೇಳ ವನ್ನು ಏರ್ಪಡಿಸುವಂತೆ ಭೈರಸಂದ್ರದ ಪಟಾ ಕಣಿತದ ರಾಮಣ್ಣನಿಗೆ ಹೇಳಿದ್ದೆ. ಇಂತಹ ಕೆಲಸಗಳಿಗೆ ಎರಡು ಹಲ್ಲಿನ ಕರುವಿನಂತೆ ಕೆಲಸ ಮಾಡುವ ಆತ ಭೈರಸಂದ್ರದಲ್ಲಿ ಏರ್ಪಡಿಸಿದ ಮೇಳದಲ್ಲಿ ಅನೇಕ ಕಲಾತಂಡಗಳು ಬಹು ಉತ್ಸಾಹದಿಂದ ಭಾಗವಹಿಸಿದ್ದುವು. ಈ ಹಾಡು ಹಾಡಿ ರುವ ಕಾಡು ಅಂಕನಹಳ್ಳಿ ಮರಿಅರಸಮ್ಮ, ಭೈರಸಂದ್ರದ ಲಕ್ಕಮ್ಮ, ಹಟ್ಣದ ಅರಸಮ್ಮ, ಬಿಳಿಗುಂದದ ಮಂಗಮ್ಮ ಮತ್ತು ಮಹಾಲಕ್ಷ್ಮಿ ಮತ್ತು ಸಂಗಾತಿಯರು ಹಾಡು ಗಾರಿಕೆಯಲ್ಲಿ ಭಾಗವಹಿಸಿದ್ದರು. ಎಲೇಕೊಪ್ಪದ ಬಸವೇ ಗೌಡರ, ಕರೀಜೀರಳ್ಳಿಯವರ, ಭೈರಸಂದ್ರದವರ ಭಾಗ

ವಂತಿಕೆ ಮೇಳ, ಅಂಬಲ್ ಜೀರಹಳ್ಳಿಯ ರಾಮೇಗೌಡ, ದೊಡ್ಡಮಧುರೆಪಾಳ್ಯದ ಲಕ್ಕಣ್ಣ ಮತ್ತು ಬೆಟ್ಟದಕೋಟೆ ರಂಗೇಗೌಡ ಇವರ ಕೋಲಾಟ ತಂಡಗಳು ನೃತ್ಯಮೇಳದಲ್ಲಿ ಭಾಗವಹಿಸಿದ್ದುವು. ಸ್ವತಃ ಭೈರಸಂದ್ರದ ರಾಮಣ್ಣನೇ ತನ್ನ ತಂಡದವರೊಡನೆ ಪಟಾಕುಣಿತದ ಪ್ರದರ್ಶನ ಮಾಡಿದ. ಒಂದು ದಿವಸದ ಈ ಮೇಳ ಬಹು ಯಶಸ್ವಿಯಾಗಿ ಜರುಗಿತು.

ಈ ಮೇಳದಲ್ಲಿ ಭಾಗವಹಿಸಿದ ಎಲ್ಲರ ಹಾಡುಗಳನ್ನೂ ಕುಣಿತಗಳನ್ನೂ ಧ್ವನಿಮುದ್ರಿಸಿಕೊಳ್ಳಲಾಯಿತು. ಆದರೆ ಕ್ಯಾಸೆಟ್‌ಗೆ ಆಯ್ಕೆಯಾಗಿರುವ ಹಾಡು ಕಾಡುಅಂಕನಹಳ್ಳಿಯ ಮರಿಅರಸಮ್ಮನದು. ೧೫-೧೧-೧೯೮೧ ರಂದು ನಡೆದ ಈ ಮೇಳದನಂತರ ಕಾಡುಅಂಕನಹಳ್ಳಿಗೇ ಕೆಲವು ತಿಂಗಳುಗಳ ನಂತರ ಹೋಗಿಬಂದೆ. 'ನಮ್ಮೂರಿಗೇ ಬನ್ನಿ ಸ್ವಾಮಿ. ಹಾಡೋರು ಬೇಕಾದಂಗವರೆ' ಎಂದು ಮರಿಅರಸಮ್ಮ ಹೇಳಿದ್ದಳು. ಹೋಗಿ ನೋಡಿದಾಗ ಆಕೆಯ ಮಾತು ಸುಳ್ಳಾಗಲಿಲ್ಲ. ನಾನು ಹಾಡಬೇಕು, ತಾನು ಹಾಡಬೇಕು ಎಂದು ಬಹುಜನ ಹೆಂಗಸರು ಸೇರಿದ್ದರು. ಅವರ ಹಾಡನ್ನೆಲ್ಲಾ ಕೇಳಿದೆ. ಅದೇ ಊರಿನ ತಮಟೆ ನಗಾರಿ ವಾದ್ಯ ತುಂಬಾ ಸೊಗಸಾಗಿದೆ. ಹಳ್ಳಿಗಳಲ್ಲಿ ಎಂತೆಂಥ ಕಲಾವಿದರಿದ್ದಾರೆ, ಏನು ಕಥೆ! ಆದರೆ ಕೇಳುವವರು ಇಲ್ಲದೆ ಅನಾಥರಾಗಿಬಿಟ್ಟಿದ್ದಾರೆ. ಇಲ್ಲಿಯವರೆವಿಗೂ ಅವರು ಮದುವೆ ಮುಂಜಿಗಳಲ್ಲಿ, ಹಬ್ಬ ಹರಿದಿನಗಳಲ್ಲಿ

ಹಾಡಿಕೊಂಡು, ವಾದ್ಯ ಮಾಡಿಕೊಂಡು, ಕುಣಿದುಕೊಂಡು ಬರುತ್ತಿದ್ದರು. ಈಗ ಮದುವೆಗಳಲ್ಲಿ ಸೋಬಾನೆ ಪದಗಳಿಲ್ಲ. ಹಬ್ಬಗಳನ್ನು ಮಾಡಿದರೆ ಮಾಡಿದರು ಇಲ್ಲದಿದ್ದರೆ ಇಲ್ಲ. ಮಾಡಿದರೂ ಮೈಕು ಸಿನೆಮಾ ಹಾಡು ಅಬ್ಬರಿಸುತ್ತವೆ. ಹಳ್ಳಿಯ ವಾದ್ಯಗಳಿಗೆ ಅವಕಾಶವಿಲ್ಲ ಸುಗ್ಗಿ ಹಬ್ಬಗಳೇ ಅಪರೂಪ. ಇನ್ನು ರಂಗದ ಕುಣಿತ, ಸುಗ್ಗಿ ಕುಣಿತಗಳಿಗೆಲ್ಲಿ ಅವಕಾಶ! ಹೀಗಾಗಿ ಅಂಥವನ್ನೆಲ್ಲಾ ಜನ ಕೈಬಿಟ್ಟಿದ್ದಾರೆ. ಕಲಾವಿದರೂ ತಮ್ಮ ಕಲೆಯನ್ನು ಕೈಬಿಡುವ ಕಾಲ ಬಹಳ ದೂರ ಇಲ್ಲ!

## ಸೋಬಾನೆಂಬೋದು ಶಿವನೀಗೆ

ಹಾಡಿರುವವರು : ಚೋಳಸಂದ್ರದ ಚಿಕ್ಕಮ್ಮ ಮತ್ತು ಮೂರು ಜನ ಸಂಗಾತಿಯರು.

ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕು ಚೋಳ ಸಂದ್ರದ ಕುರುಬರ ಜಾತಿಯ ಈ ಹಾಡುಗಾತಿಯರ ಪರಿ ಚಯವಾದದ್ದು ಭೈರವೇಶ್ವರ ಗೀತಗಾಯನ ಮೇಳದಲ್ಲಿ. ಸುಮಾರು ೧೯೮೦ರಲ್ಲಿ. ಚಿಕ್ಕಮ್ಮ ಮತ್ತು ಸಂಗಾತಿಯ ರನ್ನು ನೋಡಿದ ಕೂಡಲೇ ಇವರು ಗೌರವಸ್ಥ ಕುಟುಂಬ ದವರೆಂಬುದು ಗೊತ್ತಾಗಿಬಿಡುತ್ತದೆ. ಮಡಿಯಾದ ಸೀರೆ, ಹಣೆಗೆ ಕುಂಕುಮ ಅಥವಾ ವಿಭೂತಿ, ತಲೆಗೆ ಹೂವು, ಮೇಲಾಗಿ ಅಚ್ಚುಕಟ್ಟಾದ ಮಾತು–ಇವುಗಳನ್ನು ಕಾಣ ಬಹುದು. ನೂರಾರು ಜನರು ಸೇರಿದ ಮೇಳದಲ್ಲಿ ಹಾಡಿದ ಇವರ ಹಾಡನ್ನು ಮೆಚ್ಚಿಕೊಂಡ ನಾನು ೫-೭-೧೯೮೧ ರಿಂದ ೧೨-೭-೧೯೮೧ರವರೆಗೆ ಎಂಟು ದಿನ ಚುಂಚನಗಿರಿ ಯಲ್ಲಿ ಮೊಕ್ಕಾಂ ಮಾಡಿ ಮೇಳದಲ್ಲಿ ಅತ್ಯುತ್ತಮವಾಗಿ ಹಾಡಿದ ಸುಮಾರು ೧೦ ಮಹಿಳಾ ತಂಡದವರನ್ನು ಕರೆಸಿ ಅವರ ಎಲ್ಲಾ ಹಾಡನ್ನು ಧ್ವನಿಮುದ್ರಣ ಮಾಡಿಕೊಂಡೆ.

ಹಳ್ಳಿಯ ಹೆಂಗಸರ ಹಾಡುಗಾರಿಕೆಗೆ ವಾದ್ಯಗಳನ್ನು ಒದಗಿಸಿದರೆ ಹೇಗಿರುತ್ತೆ ನೋಡೋಣ ಎಂದು ಬೆಂಗಳೂರಿನಿಂದ ಸಂಗೀತಗಾರರಾದ ಬಿ. ಎಸ್. ಚಿನ್ನಪ್ಪ, ಪಿಟೀಲು ವಾದಕರಾದ ಎಂ.ಎಸ್. ಸುಬ್ರಮಣ್ಯಂ ಮತ್ತು ತಬಲಾ ಸಾಥಿ ಸುಭಾಷ್ ಮಂಜುಕಿಹಾಳ ಇವರನ್ನು ಕರೆದುಕೊಂಡು ಹೋಗಿದ್ದೆ. ನಮ್ಮ ಹಳ್ಳಿ ಜನ ಯಾವ ಕಟ್ಟುಪಾಡಿಗೂ ಒಳಪಡದೆ ತಮ್ಮ ಪಾಡಿಗೆ ತಾವು ಹಾಡಿಕೊಂಡು ಹೋಗುವವರು. ಅವರು ಚಿನ್ನಪ್ಪನವರ ನಿರ್ದೇಶನಕ್ಕಾಗಲೀ ಸುಬ್ರಮಣ್ಯಂ ಅವರ ಪಿಟೀಲಿಗಾಗಲೀ ಕಟ್ಟುಬೀಳಲಿಲ್ಲ. ಆರಂಭದ ಒಂದು ನುಡಿಯನ್ನು ವಾದ್ಯಕ್ಕೆ ಹೊಂದಿಸಿ ಕಷ್ಟಪಟ್ಟು ಹಾಡಿದಮೇಲೆ ಆಮೇಲೆ ಅವರದೇ ದಾರಿ ಹಿಡಿದು ಬಿಡುತ್ತಿದ್ದರು. ಆದರೂ ಕೆಲವರು ತಾಳಕ್ಕೆ ಹೊಂದಿಕೊಂಡು ಹಾಡಿದರು. ಚೋಳಸಂದ್ರದ ಚಿಕ್ಕಮ್ಮನ ತಂಡದವರೂ ಕೆಲವು ಹಾಡುಗಳನ್ನು ವಾದ್ಯದ ಮೇಲೆ ಹಾಡಿದ್ದಾರೆ.

ಈ ತಂಡ ಹಾಡುವ ಹಾಡುಗಳಿಗೆ ಲೆಕ್ಕವಿಲ್ಲ. ಮಾದೇವ, ರಾಮೇಂದ್ರ, ಭೈರುವ, ಮಾಳವ್ವ, ಸೋಬಾನ, ಮಾದೇವಿ, ಕುರುಬರ ಹುಚ್ಚಯ್ಯ, ಒಳಿಪೂಜೆ, ಮುಳಿರಾಯ, ಬಸವಣ್ಣ, ತಿಂಗಳುಮಾವ, ಜೋಗಪ್ಪ, ನಾದನಿ, ಅಣ್ಣ-ತಮ್ಮ, ಬೀಸುವುದು, ಕುಟುದಮ್ಮ, ತುಪ್ಪದ ಮುಡು ನರಸಿಂಹ, ತಿರುಪತಿ ತಿಮ್ಮಪ್ಪ, ಬಳೆಗಾರಶೆಟ್ಟಿ, ನಕಲಿಪದ, ತೊಟ್ಟಿಲು ತೂಗುವುದು - ಇಷ್ಟೆಲ್ಲಾ ಹಾಡು

ಗಳನ್ನು ಹಾಡುತ್ತಾರೆ. ಅವರ ಹಾಡಿನಲ್ಲಿ ಏರಿಳಿತಗಳು ಕಮ್ಮಿ. ನಿಧಾನವಾಗಿ, ಹರಿಯುತ್ತದೋ ಇಲ್ಲವೋ ಎಂಬ ಸಂದೇಹ ಉಂಟುಮಾಡುವ ತುಂಬಿದ ನದಿಯಂತೆ ಅವರ ಹಾಡು. ಆದರೆ ಒಳ್ಳೆಯ ಸಾಹಿತ್ಯ, ಸೊಲ್ಲು, ಪಲ್ಲವಿಗಳೆಲ್ಲಾ ಇವೆ. 'ಹೆಣ್ಣು ಚಂದ ಕಣ್ಣಿನಿಂದ ಕಣ್ಣು ಮೂಗು ನ್ಯಾರಾದ ತುರುಬಿನಿಂದ' - ಇಂತಹ ಹಲವು ಹೊಸ ಹಾಡುಗಳನ್ನು ಹಾಡುತ್ತಾರೆ.

ಈ ನಾಲ್ಕು ಜನರ ತಂಡದಲ್ಲಿ ಒಬ್ಬಾಕೆ ಈಚೆಗೆ ತೀರಿಹೋಗಿದ್ದಾಳೆಂದು ತಿಳಿಯಿತು. ಇಷ್ಟರಲ್ಲೇ ನಾನು ಚೋಳಸಂದ್ರಕ್ಕೇ ಹೋಗಿ ಅವರ ಹಾಡಿನ ಕ್ಯಾಸೆಟ್ಟೊಂದನ್ನು ಕೊಟ್ಟು ಮಾತಾಡಿಸಿಕೊಂಡು ಬರುತ್ತೇನೆ.

ಇಲ್ಲಿ ಕೇಳಾರಿ ನಮ್ಮ ಹಾಡ
ಮತ್ತು ಹನ್ನೆರಡು ದೇವರಿಗೆ ಹರಕೆ ಹೊತ್ತು
ಹಡದೀನಿ

ಹಾಡಿರುವವರು : ಗೌರವ್ವ ಮಾದರ (೫೫ ವರ್ಷ), ಲಕ್ಷ್ಮೀಬಾಯಿ ಅಯ್ಯಪ್ಪ ಮಾದರ (೪೫ ವರ್ಷ), ಯಮುನವ್ವ (೪೦) ಮತ್ತು ಕಾಳವ್ವ (೩೫).

ಇವರೆಲ್ಲ ಬಿಜಾಪುರ ಜಿಲ್ಲೆ ಅದೇ ತಾಲ್ಲೂಕಿನ ತಿಕ್ಕೋಟಾದವರು. ಹೆಸರೇ ಸೂಚಿಸುವಂತೆ ಇವರು ಮಾದರ್ ಅಂದರೆ ಮಾದಿಗರ ಜಾತಿಯವರು. ಉತ್ತರ ಕರ್ನಾಟಕದಲ್ಲಿ ಚೌಡಿಕೆ ಮತ್ತು ಡಪ್ಪು ಬಾರಿಸಿಕೊಂಡು ಎಲ್ಲಮ್ಮನ ಮೇಲೆ, ಗೀಗೀಪದ ಮತ್ತು ಲಾವಣಿ ಹಾಡುವ ಹೆಂಗಸರೆಲ್ಲ ಹರಿಜನರು. ಇವರು ಸೌದತ್ತಿ ಎಲ್ಲಮ್ಮನ ಭಕ್ತರು. ಎಲ್ಲಮ್ಮನ ಭಕ್ತರಾದ ಇವರಿಗೆ ಜೋಗತಿಯ ರೆಂದೂ ಕರೆಯುತ್ತಾರೆ. ಜೋಗತಿಯರಿಗೆ ಅಂಟಿದ ಕಳಂಕ ಏನೇ ಇರಲಿ, ಇವರು ಹಾಡುವುದರಲ್ಲಿ ಎತ್ತಿದಕೈ. ಅವರ ಅಪೂರ್ವ ಕಂಠ ಹಾಗೂ ಧಾಟಿಗಳು ಎಲ್ಲಮ್ಮನೇ ಕೊಟ್ಟ ವರ ಎನ್ನಬಹುದು.

ಪ್ರಸ್ತುತ ಗೌರವ್ವ ಮತ್ತು ಲಕ್ಷ್ಮೀಬಾಯಿ ಅಕ್ಕ ತಂಗಿಯರು. ಒಬ್ಬರ ಕೈಯಲ್ಲಿ ಚೌಡಿಕೆ, ಇನ್ನೊಬ್ಬರ ಕೈಯಲ್ಲಿ ಬಾರಿಕೆ. ಒಂದು ತಾಳ, ಇನ್ನೊಂದು ಶ್ರುತಿ. ಈ ಇಬ್ಬರು ಅಕ್ಕತಂಗಿಯರು ಚೌಡಿಕೆ ನುಡಿಸಿಕೊಂಡು ಹಾಡಲು ಎದ್ದು ನಿಂತರೆ ಎಂಥವರೂ ತಲೆದೂಗಬೇಕು. ಎಲ್ಲಮ್ಮ, ಗಣಪತಿ, ದುರುಗವ್ವ, ಮಾಲಗಾರ ನಾಗ ಶೆಟ್ಟಿ, ಗೀಗೀ, ಸೋಬಾನೆ, ಜೋಗುಳ, ಲಾಲಿ, ತೂಗುವ ಪದ, ಬೀಸುವ ಪದ ಮುಂತಾದ ಹಾಡುಗಳನ್ನು ಹಾಡು ತ್ತಾರೆ. ಮದುವೆ, ಲಾಲಿ, ಬೀಸುವ ಪದ ಮುಂತಾದವು ಗಳನ್ನು ವಾದ್ಯ ಇಲ್ಲದೆಯೂ ಹಾಡುತ್ತಾರೆ. ಇಲ್ಲಿ ಲಗ್ನದ ಪದದಲ್ಲಿ ಬರುವ ಹಾಡುಗಳಲ್ಲಿ ಬಂದು ಬೀಗರನ್ನು ಜರಿ ಯುವ ಪದ ಮತ್ತು ಇನ್ನೊಂದು ಹೆಣ್ಣನ್ನು ಗಂಡನ ಮನೆಗೆ ಕಳಿಸುವಾಗ ಹಾಡುವ ಪದ.

ಸುಮಾರು 1981ನೇ ಇಸವಿಯಲ್ಲಿ ದೆಹಲಿಗೆ ಹೋಗಿ ಇಂದಿರಾ ಗಾಂಧಿಯವರ ಮುಂದೆಯೂ ಹಾಡಿ ಊರಿಗೆ ಹೋಗಲು ಬೆಂಗಳೂರಿಗೆ ಬಂದಿದ್ದಾಗ ಅವರನ್ನು ಟ್ರಸ್ಟಿನ ಧ್ವನಿಮುದ್ರಿಕಾಲಯಕ್ಕೆ ಕರೆಸಿ ಹಾಡಿಸಿದೆ. ಮತ್ತೆ ಹಲವಾರು ಸಂದರ್ಭಗಳಲ್ಲಿಯೂ ಅವರ ಹಾಡು ಕೇಳಿ ದ್ದೇನೆ. ಬೆಂಗಳೂರು ಆಕಾಶವಾಣಿಯಲ್ಲಿಯೂ ಹಾಡಿ ದ್ದಾರೆ. ಈ ಪ್ರತಿಭಾನ್ವಿತ ಕಲಾವಿದೆಯರಿಗೆ ಮಾಸಾಶನವೂ ಸಿಕ್ಕಿದೆ. ಈಗ ಗೌರವ್ವ ಜಾನಪದ ಅಕಾಡೆಮಿ ಸದಸ್ಯೆಯೂ ಆಗಿದ್ದಾಳೆ.

## ಹೆಣ್ಣು ಮಕ್ಕಳ ಕಳಿವಿ ಹ್ಯಂಗಿದ್ದಿ ತಾಯಮ್ಮ

ಹಾಡಿರುವವರು : ಕಂಬೀಪುರ ನಂಜಮ್ಮ ಮತ್ತು ಸಂಗಾತಿಯರು.

ಕಂಬೀಪುರ ಬೆಂಗಳೂರು ದಕ್ಷಿಣ ತಾಲ್ಲೂಕಿನಲ್ಲಿದೆ. ದೆಹಲಿಯಲ್ಲಿ ಸರ್ಕಾರಿ ಸೇವೆಯಲ್ಲಿದ್ದು ಅನೇಕ ಕನ್ನಡ ಗ್ರಂಥಗಳನ್ನು ಹಿಂದಿಗೆ ಅನುವಾದಿಸಿ ಪ್ರಶಸ್ತಿ ವಗೈರೆ ಪಡೆದಿರುವ ಬಿ. ಆರ್. ನಾರಾಯಣ್ ಅವರು ಈ ಊರಿನವರು. ನಾನು ದೆಹಲಿಗೆ ಹೋದಾಗಲೆಲ್ಲಾ ನಾರಾಯಣ ಮತ್ತು ಅವರ ಕುಟುಂಬದ ಆತಿಥ್ಯ ತಪ್ಪದೇ ಪಡೆದಿದ್ದೇನೆ. ಈಚೆಗೆ ಇವರು ನಿವೃತ್ತರಾದ ಮೇಲೆ ಕಂಬೀಪುರಕ್ಕೆ ಬಂದು ನೆಲೆಸಿದ್ದಾರೆ.

ನಾನು ಒಂದು ಸಲ ದೆಹಲಿಗೆ ಹೋದಾಗ ನನಗೆ ಜಾನಪದದ ಹುಚ್ಚು ಹಿಡಿದಿದೆ ಎಂದು ನಾರಾಯಣ್ ಅವರಿಗೆ ತಿಳಿದು ಆ ಹುಚ್ಚು ಬಿಡಿಸುವುದಕ್ಕಾಗಿ 'ನಮ್ಮೂರಿನಲ್ಲಿ ಹರಿಜನರ ಹೆಂಗಸೊಬ್ಬಳಿದ್ದಾಳೆ, ಚೆನ್ನಾಗಿ ಹಾಡ್ತಾಳೆ' ಎಂದು ತಿಳಿಸಿದ್ದರು. ರೋಗಿ ಬಯಸಿದ್ದೂ ಹಾಲು ಅನ್ನ ವೈದ್ಯ ಹೇಳಿದ್ದೂ ಹಾಲು ಅನ್ನ ಅಂದ ಹಾಗೆ, ನಾನು ಅವರ ತಾಯಿ ಪಂಚಾಯ್ತಿ ಚೇರ್ಮನ್ ಕೆಂಪಮ್ಮನವರಿಗೆ

ಕಾಗದ ಬರೆದು ೧೪-೧-೮೧ ರಂದು (ಸಂಕ್ರಾಂತಿ ಹಬ್ಬದ ದಿನ) ಕಂಬೀಪುರಕ್ಕೆ ಟೇಪ್ ರಿಕಾರ್ಡರ್ ಸಮೇತ ಹೋದೆ. ಹಳ್ಳಿಯ ಆತಿಥ್ಯ ಆಯಿತು. ನಂಜಮ್ಮನನ್ನು ಕರೆಸಿದರು. ಎಲ್ಲಿ ಧ್ವನಿಮುದ್ರಣ ಮಾಡಿಕೊಳ್ಳುವುದು? ಮನೆಯಲ್ಲಾದರೆ ಜನ ಬಂದು ಮುತ್ತಿಕೊಳ್ತಾರೆ ಎಂದು ಫ್ಲೋರ್ ಮಿಲ್ (ಆಧುನಿಕ ಬೀಸುವ ಕಲ್ಲು) ಇದ್ದ ಕೋಣೆಯಲ್ಲಿ ಕುಳಿತು ಧ್ವನಿಮುದ್ರಣ ಆರಂಭಿಸಿದೆ. ನಂಜಮ್ಮನ ಹಾಡಿನ ರೀತಿಯೇ ಬೇರೆ. ತ್ರಿಪದಿಯನ್ನು ಮಾಮೂಲಾಗಿ ಹಾಡದೆ ತನ್ನದೇ ರೀತಿಯಲ್ಲಿ ಹಾಡುತ್ತಾಳೆ. ತ್ರಿಪದಿಯ ಪ್ರಾಸಗಳೂ ಏರುಪೇರಾಗುತ್ತವೆ. ಆದರೂ ಹಾಗೆ ಆಗಿದೆ ಎಂಬ ಭಾವನೆಯೇ ಬರುವುದಿಲ್ಲ. ಸ್ವಲ್ಪ ಒಡಕು ಕಂಠವಾದರೂ ಅದು ಹಿತವಾಗಿದೆ. ಕೇಳುವವರಿಗೆ ಇನ್ನೂ ಸ್ವಲ್ಪ ಕೇಳಬೇಕೆನ್ನಿಸುತ್ತದೆ. ಆದಿಕರ್ನಾಟಕ ಜಾತಿಯ ಕೂಲಿನಾಲಿಯಿಂದ ಬಾಳು ಸಾಗಿಸುವ, ಸುಮಾರು ೫೦ ವರ್ಷದ ನಂಜಮ್ಮ ಬೀಸೋಪದ, ತೌರಿನಮೇಲೆ, ಅಣ್ಣ-ತಂಗಿಯರ ಮೇಲೆ, ತತ್ವಪದ ಮತ್ತು ಸುಲಿಪಲ್ಲು ರಾಜನ ಕಥೆಯನ್ನು ಹಾಡಿದಳು.

ಈಕೆ ಹಾಡುತ್ತಿದ್ದುದನ್ನು ಕೇಳಿ ಅದೇ ಊರಿನ ಲಕ್ಷ್ಮಮ್ಮ ಎಂಬ ಹರಿಜನರ ಹೆಂಗಸು ಬಂದು ಗಂಗೆ–ಗೌರಿ ಸಂವಾದ, ತೊಳಸೋಪದ, ಪೂಜಮ್ಮನ ಮೇಲೆ, ಸೋಬಾನೆ ಪದ, ಧರ್ಮರ ಪದ ಹಾಡಿದಳು.

ಇವರಿಬ್ಬರ ಹಾಡುಗಳನ್ನು ಮುಗಿಸುವಷ್ಟರಲ್ಲಿ

ಹತ್ತಿರದ ಒಂದು ಕ್ರೈಸ್ತ ಕಾಲೋನಿಯ ಮೇರಿ ಮತ್ತು ಆಕೆಯ ಸಂಗಾತಿಯರು ಓಡೋಡಿ ಬಂದರು – ನಾವೂ ಹಾಡ್ತೀವಿ ಅಂತ. ಇವರ ಪೂರ್ವಿಕರು ಮೊದಲಿಗೆ ಹರಿಜನರಾಗಿದ್ದು ಕ್ರೈಸ್ತರಾದವರು. ಆದರೇನು? ಅವರಿನ್ನೂ ಹಿಂದೆ ಕಲಿತ ಹಾಡುಗಳನ್ನು ಮರೆತಿಲ್ಲ. ಹಾಡಿ ಎಂದಾಗ ಸಾಮಾನ್ಯವಾಗಿ ಚರ್ಚ್‌ನಲ್ಲಿ ಪ್ರಾರ್ಥನೆ ಮಾಡುವಾಗ ಹಾಡುವ ಧಾಟಿಯಲ್ಲಿ ಏಸು ಸ್ವಾಮಿಯ ಮೇಲೆ 'ತನುವ ನರ್ಪಿಸಿ ಮನವನರ್ಪಿಸಿ ಎನ್ನನೇ ಅರ್ಪಿಸಿ' ಎಂದು ಹಾಡಿದರು. ಆಮೇಲೆ ಮೈನೆರೆದ ಪದ, ಉತ್ತರದೇವಿ ಮೇಲೆ, ಕೃಷ್ಣನಮೇಲೆ ಹಾಡಿದರು. ಒಳ್ಳೆಯ ಕಂಠದಲ್ಲಿ ಸೊಗಸಾಗಿ ಹಾಡಿಬಿಟ್ಟರು.

ಇವರದು ಮುಗಿಯಿತು ಎಂದಾಗ ಬಿಳೀಸೀರೆ ಉಟ್ಟ ಲಕ್ಷಣವಾದ ನಾಲ್ಕು ಜನ ಹೆಂಗಸರು ಬಂದರು. ಸುಮ್ಮನೆ ಹಾಡು ಕೇಳಲು ಬಂದಿದ್ದಾರೆ ಎಂದು ನನ್ನ ಭಾವನೆ. ಆದರೆ ಅವರು ನಾವೂ ಹಾಡುತ್ತೇವೆ ಎಂದರು. ಯಾವ ಭಾಷೆಯಲ್ಲಿ ಹಾಡುತ್ತೀರಿ ಎಂದು ಕೇಳಿದಾಗ ಉರ್ದೂ ಭಾಷೆಯಲ್ಲಿ ಹಾಡುತ್ತೇವೆ ಎಂದರು. ಹಾಡಿ ಎಂದೆ. ಮೊದಲು ಅಲ್ಲಾನ ಪ್ರಾರ್ಥನೆ ಹಾಡು ಹಾಡಿ ಆಮೇಲೆ ಬೀಸುವ ಪದ ಮತ್ತು ಮದುವೆಯಲ್ಲಿ ಗಂಡನ್ನು ಜರಿಯುವ ಪದ ಹಾಡಿದರು. ಗಂಡನ್ನು ಬಕರಾ ಎಂದು ಕರೆದದ್ದು ಬಿಟ್ಟರೆ ಉಳಿದದ್ದು ನನಗೇನೂ ಅರ್ಥವಾಗಲಿಲ್ಲ. ಜಾನಪದ ಎಲ್ಲಾ ಮತಸ್ಥರಿಗೂ ಜಾತಿಯವರಿಗೂ ಸೇರಿದ್ದು.

ಅದಕ್ಕೆ ಆ ಜಾತಿ ಈ ಜಾತಿ ಆ ಭಾಷೆ ಈ ಭಾಷೆ ಎಂಬ ವಂಡಿ ಇಲ್ಲ. ಹಾಡಿದ ಇಬ್ಬರು ಹೆಣ್ಣು ಮಕ್ಕಳ ಜೊತೆಗೆ ಬಂದಿದ್ದವರು ಅವರ ತಾಯಿ ಮತ್ತು ಅತ್ತೆ. ಈ ನಾಲ್ಕು ಜನರ ಹೆಸರುಗಳು : ಇದ್ಬಿನ್ನೀಸಾ, ಕಮರು ನ್ನೀಸಾ, ಇಮಾಮಿ ಮತ್ತು ಸಾದನಿ (ಹೆಸರು ತಪ್ಪಿದ್ದರೆ ಕ್ಷಮಿಸಿ).

ಒಂದು ಹಬ್ಬದ ದಿನ ಎಷ್ಟೊಂದು ಕೆಲಸ ಮಾಡಿದೆ ಎಂದು ನನಗೇ ಆಶ್ಚರ್ಯವಾಯಿತು. ಮಾಡಿದರೆ ಎಷ್ಟು ಕೆಲಸವಿಲ್ಲ? ಆದರೆ ಯಾರು ಮಾಡುತ್ತಿದ್ದಾರೆ? ಪ್ರತಿ ಯೊಂದು ಹಳ್ಳಿಯಲ್ಲಿಯೂ ಹಾಡುಗಾರರೂ ಕಲಾವಿದರೂ ಇದ್ದಾರೆ. ಅವರ ಹಾಡುಗಳನ್ನು ಧ್ವನಿಮುದ್ರಿಸಿಕೊಳ್ಳದೇ ಹೋದರೆ ಕಲೆಗಳನ್ನು ಚಿತ್ರೀಕರಿಸಿಕೊಳ್ಳದೇ ಇದ್ದರೆ ಅವು ಮುಂದೆ ಕಣ್ಮರೆಯಾದಂತೆ ಮತ್ತು ಕಿವಿ ಮರೆಯಾ ದಂತೆ. ಆದರೆ ಅಲ್ಲೊಂದು ಹಾಡು ಇಲ್ಲೊಂದು ಹಾಡು ಸಂಗ್ರಹಿಸಿ, ಪ್ರಕಟಿಸಿ ತಾನೊಬ್ಬ ಜಾನಪದ ವಿದ್ವಾಂಸ ಎಂದುಹೇಳಿಕೊಳ್ಳುವವರೇ ನಮ್ಮಲ್ಲಿ ಹೆಚ್ಚು.

## ಕಲ್ಲಮ್ಮ ಕೈಯ ಬಿಡೆ

ಹಾಡಿರುವವರು : ಕರಿಜೀರಳ್ಳಿ ಸಾಕಮ್ಮ (೪೦ ವರ್ಷ), ಗುರುಲಿಂಗಮ್ಮ (೩೦ ವರ್ಷ) ಮತ್ತು ಗಂಗಮ್ಮ (೨೫ ವರ್ಷ)

ಒಮ್ಮೆ ನಾಗಮಂಗಲ ತಾಲ್ಲೂಕು ನೆಲ್ಲೀಗೆರೆ ಅರಣ್ಯ ನಿವಾಸದಲ್ಲಿ ಬಿಡಾರ ಮಾಡಿದ್ದಾಗ ಅದರ ಉಸ್ತುವಾರಿ ನೋಡಿಕೊಳ್ಳುವ ಮನುಷ್ಯ "ಸ್ವಾಮಿ ಇಲ್ಲೇ ಹತ್ತಿರ ಕರೀ ಜೀರಳ್ಳಿ ಅಂತ ಅದೆ. ಅಲ್ಲಿ ಏ.ಕೆ. ಜನ ಚನ್ನಾಗಿ ಹಾಡ್ತಾರೆ. ಕರಸ್ತೀನಿ ಬೇಕಾದ್ರೆ" ಅಂದ. ಅದಕ್ಕೆ ನಾನು "ಈ ದಿನ ಬೇಡ, ಇನ್ನೊಂದಿವಸ ಬರ್ತೀನಿ. ಆ ಹೊತ್ತು ಕರಕೊಂಡು ಬರೀವಂತೆ" ಎಂದು ಹೇಳಿ ದಿನ ಗೊತ್ತು ಮಾಡಿದೆ. ಗೊತ್ತು ಮಾಡಿದ ದಿನ ಅಂದರೆ ೧೪-೧೨-೧೯೮೧ರಂದು ಟೇಪ್ ರೆಕಾರ್ಡರ್ ಮತ್ತು ಸಿಬ್ಬಂದಿ ಸಮೇತ ನೆಲ್ಲೀಗೆರೆಯಲ್ಲಿ ಮೊಕ್ಕಾಂ ಮಾಡಿ ಕರೀಜೀರಳ್ಳಿ ಸಾಕಮ್ಮ ಮತ್ತು ಗುರುಲಿಂಗಮ್ಮ ಮತ್ತು ಗಂಗಮ್ಮ ಇವರ ಹಾಡುಗಳನ್ನು ಧ್ವನಿಮುದ್ರಣ ಮಾಡಿಕೊಂಡೆ. (ಇದೇ ಮೊದಲು ಈಗ ಹಾಲಿ ಟ್ರಸ್ಟಿನಲ್ಲಿ ಕೆಲಸ ಮಾಡು ತ್ತಿರುವ ವಿ.ಎನ್. ಶಿವರಾಮು ನನ್ನನ್ನು ಕಂಡದ್ದು. ಆಗ

ಟ್ರಸ್ಟಿನಲ್ಲಿ ಇದ್ದವರು ಜಿ. ಗೋವಿಂದರಾಜು) ಸಾಕಮ್ಮನ ಗಂಡನೂ ಬಂದಿದ್ದ. ಆತ ಯಾವುದೋ ಸಣ್ಣ ಸರ್ಕಾರಿ ಕೆಲಸದಲ್ಲಿದ್ದಾನೆ. ಆದರೆ ಸಾಕಮ್ಮನ ಮುಖ್ಯ ಸಂಪಾದನೆ ಕೂಲಿನಾಲಿಯಿಂದ. ಆಗಾಗ್ಗೆ ಈ ಗಂಡ ಹೆಂಡತಿಯರಿಗೆ ತಮಾಷೆಯ ಮಾತುಗಳು ಜರುಗುತ್ತಿದ್ದವು. ಅವೂ ಧ್ವನಿ ಮುದ್ರಿಕೆಯಲ್ಲಿವೆ.

ಸಾಕಮ್ಮ ಮತ್ತು ಗುರುಲಿಂಗಮ್ಮ ಹಾಡಿದ ಹಾಡುಗಳು ಅನೇಕ. ಭೈರುವ, ನಂಜಯ್ಯ, ಬೀಸುವುದು, ತಮ್ಮಯ್ಯ, ಅಣ್ಣಯ್ಯ, ಮಾರಮ್ಮ, ಮದುವೆಯ ಎಲ್ಲಾ ಶಾಸ್ತ್ರದ ಹಾಡುಗಳು, ಕೃಷ್ಣ - ರುಕ್ಮಿಣಿ, ತಿಂಗಳು ಮಾವ, ಮಳೆರಾಯ, ಕೃಷ್ಣ - ಗೊಲ್ಲತಿಯರು, ಆರತಿ, ತತ್ವ, ನಾಟಿ - ಈ ಪದಗಳು. ಇನ್ನೂ ಚಿಕ್ಕವಯಸ್ಸಿನ ಗುರುಲಿಂಗಮ್ಮ ಕಲ್ಲಮ್ಮ ಕೈಯ್ಯ ಬಿಡೆ ಪದ ಹಾಡಿದಳು. ಧಾಟಿ ಅಪೂರ್ವವಾದುದು ; ಬೇರೆ ಯಾರೂ ಈ ಧಾಟಿಯಲ್ಲಿ ಹಾಡಿದ್ದನ್ನು ನಾನು ಇಲ್ಲಿಯವರೆಗೆ ಕೇಳಿಲ್ಲ.

ಇವರಿಗೆ ಬರುವ ಹಾಡುಗಳನ್ನೆಲ್ಲಾ ಹಾಡಿಸಿ ಕೈಬಿಟ್ಟಾಗ ಮುಂಗೋಳಿ ಕೂಗಿತು. ಅವರಿಗೆ ಸೂಕ್ತವಾದ ಸಂಭಾವನೆ ಕೊಟ್ಟು ಕಳುಹಿಸಿದೆ. ಆದರೆ ಅವರಿಗೆ ತೃಪ್ತಿಯಾದದ್ದು ಸಂಭಾವನೆಯಿಂದ ಅಲ್ಲ, ತಮ್ಮ ಹಾಡನ್ನು ಧ್ವನಿಮುದ್ರಿಸಿಕೊಂಡದ್ದರಿಂದ ; ಎಲ್ಲೋ ಗಾಳಿಯಲ್ಲಿ ತೇಲಿ ಹೋಗುತ್ತಿದ್ದ ಹಾಡುಗಳು ಪಾಯ ಆಗಿ ಧ್ವನಿಸುರುಳಿಯಲ್ಲ ಸೇರಿದವಲ್ಲ ಎಂಬ ಸಂತೋಷದಿಂದ.

ಕರ್ನಾಟಕ ಜಾನಪದ ಟ್ರಸ್ಟಿನ ಪ್ರಕಟಣೆಯಾದ

# ಜಾನಪದ ಜಗತ್ತು

## ದ್ವೈಮಾಸಿಕ ಪತ್ರಿಕೆಯ ಚಂದಾ ವಿವರ

ವಾರ್ಷಿಕ ಚಂದಾ ರೂ. 25-00

ಸಂಘ-ಸಂಸ್ಥೆಗಳಿಗೆ ರೂ. 50-00

ಆಜೀವ ಚಂದಾ ರೂ. 150-00

ಸಂಘ-ಸಂಸ್ಥೆಗಳಿಗೆ ರೂ. 250-00

'ಜಾನಪದ ಲೋಕ' ಸದಸ್ಯತ್ವ ಮತ್ತು
'ಜಾನಪದ ಜಗತ್ತು'

ಆಜೀವ ಚಂದಾ ರೂ. 250-00

'ಜಾನಪದ ಲೋಕ' ಮಹಾ ಸದಸ್ಯತ್ವ ಮತ್ತು
'ಜಾನಪದ ಜಗತ್ತು'

ಆಜೀವ ಚಂದಾ ರೂ. 500-00

ಮಹಾ ಸದಸ್ಯರಿಗೆ 85 ರೂ. ಬೆಲೆಯ ಬೃಹತ್ ಗ್ರಂಥ
'ನಾಗವಲ್ಲಿ' ಉಚಿತ.

# ಕರ್ನಾಟಕ ಜಾನಪದ ಟ್ರಸ್ಟಿನ ಪ್ರಕಟಣೆಗಳು

ಮೈಲಾರಲಿಂಗನ ಕಾವ್ಯ ರೂ. 20-00

ಹಾಡಾನ ಬನ್ನಿ ದನಿಯೆತ್ತಿ ರೂ. 10-00

ಜಾನಪದ ಚಿತ್ರಗಳ ಗ್ರೀಟಿಂಗ್ ಕಾರ್ಡುಗಳು

12ಕ್ಕೆ ರೂ. 16-00

ಗ್ರಾಮಗೀತೆಗಳ ಕ್ಯಾಸೆಟ್ಟುಗಳು :

ಹಾಡಾನ ಬನ್ನಿ ದನಿಯೆತ್ತಿ ರೂ. 16-00

ಬಾರೆ ಸರಸತಿ ರೂ. 16-00

ಹಾವು ತುಳಿದೇನೆ ರೂ. 16-00